ಫಲಜ್ಯೋತಿಷ್ಯ – ಜ್ಯೋತಿರ್ಮಾಲಾ

ನಕ್ಷತ್ರ ೭

# ಗ್ರಹಗತಿ

ಲೇಖಕರು :

**ಎನ್. ಕೆ. ಜೋಗಳೇಕರ**

ತೇಜಸ್ವಿನಗರ, ಧಾರವಾಡ – ೨

[ ಬೆಲೆ ರೂ.೫–೦೦ ]

# ಅರ್ಪಣೆ

ನನ್ನ ಹಿರಿಯ ಹಿತೈಷಿಗಳಲ್ಲೊಬ್ಬರಾದ
ಹುಬ್ಬಳ್ಳಿಯ ಶುದ್ಧ ಆಯುರ್ವೇದ ಕಾಲೇಜಿನ ಪ್ರಿನ್ಸಿಪಾಲರಾದ

ಶ್ರೀಯುತ ಎನ್. ರಾಘವೇಂದ್ರರಾವ ಅವರಿಗೆ—

—ಲೇಖಕ

# ಮೊದಲ ನುಡಿ

ಫಲಜ್ಯೋತಿಷ್ಯ ಜ್ಯೋತಿರ್ಮಾಲೆಯ ಏಳನೆಯ ನಕ್ಷತ್ರವಾದ "ಗ್ರಹಗತಿ" ಎಂಬ ಚಿಕ್ಕ ಹೊತ್ತಿಗೆಯನ್ನು ಕನ್ನಡ ವಾಚಕವೃಂದದ ಮುಂದಿಡಲು ನನಗೆ ಆನಂದವೆನಿಸುತ್ತದೆ.

ಓದುಗರ ಒಲವಿನಂತೆಯೇ ಗ್ರಂಥಗಳನ್ನು ಬರೆಯಬೇಕೆಂಬ ಧ್ಯೇಯವುಳ್ಳ ನನ್ನ ಅಪೇಕ್ಷೆಯೇ ಗ್ರಹಗತಿಯಾಗಿ ಪ್ರಕಟವಾಗಿದೆ.

ಈ ಕೃತಿಯನ್ನು ಅರ್ಪಿಸಲು ಅನುಮತಿಯನ್ನು ನೀಡಿದ ಹಿರಿಯರಾದ ಹುಬ್ಬಳ್ಳಿಯ ಶುದ್ಧ ಆಯುರ್ವೇದ ಕಾಲೇಜಿನ ಪ್ರಿನ್ಸಿಪಾಲರಾದ ವೈದ್ಯ ಎನ್. ರಾಘವೇಂದ್ರರಾಯರಿಗೆ ನಾನು ಋಣಿಯಾಗಿದ್ದೇನೆ.

ಹಸ್ತ ಪತ್ರಿಕೆಯ ಪ್ರತಿಯನ್ನು ತಯಾರಿಸಲು ನೆರವಾದ ನನ್ನ ಮಿತ್ರರಾದ ಶ್ರೀ ಮನೋಹರ ಕಾಳೆ ಹಾಗೂ ಜಿ. ಚಂದ್ರಶೇಖರ ಇವರನ್ನೂ ಮತ್ತು ನನ್ನ ಬಂಧುವಾದ ಶ್ರೀಪಾದ ಜೋಗಳೇಕರನನ್ನೂ ಸ್ಮರಿಸುವೆ. ಕರಡು ಪ್ರತಿಯನ್ನು ತಿದ್ದುವುದರಲ್ಲಿ ಸಹಕರಿಸಿ ನೆರವಾದ ಶ್ರೀಯುತ ಭೀಮಪ್ರಸಾದ ಪಾಂಡೆ, ಮಹಾವೀರ ಪಾಂಡೆ ಇವರೆಲ್ಲರಿಗೂ ನಾನು ತುಂಬಾ ಋಣಿಯಾಗಿದ್ದೇನೆ.

ಈ ಹೊತ್ತಿಗೆಗೆ ಅಂದವಾದ ಮುಖಚಿತ್ರವನ್ನು ಚಿತ್ರಿಸಿದ ಶ್ರೀಯುತ ಜಿ. ಕೆ. ಮೂರ್ತಿ ಇವರಿಗೂ, ಪಡಿಯಚ್ಚನ್ನು ತಯಾರಿಸಿ ಕೊಟ್ಟ ಶ್ರೀ ಕೃಷ್ಣ ಪೊದ್ದಾರ ಇವರಿಗೂ, ಸಕಾಲದಲ್ಲಿ ಅಂದವಾಗಿ ಮುದ್ರಿಸಿಕೊಟ್ಟ ಶ್ರೀ ಎಮ್. ಎ. ಕಾಮತರಿಗೂ ನನ್ನ ಕೃತಜ್ಞತೆ ಸಲ್ಲುತ್ತದೆ.

ನನ್ನ ಉಳಿದ ಕೃತಿಗಳಂತೆ ಈ ಹೊಸ ಹೊತ್ತಿಗೆಯನ್ನು ಆದರದಿಂದ ವಾಚಕರು ಬರಮಾಡಿಕೊಳ್ಳುವರೆಂದು ನಂಬಿದ್ದೇನೆ.

೧೮೮೭ ವಿಶ್ವಾವಸು
ಚೈತ್ರ ಶುದ್ಧ ಪ್ರತಿಪದಾ
(ಯುಗಾದಿ)
೨-೪-೧೯೬೫

ಎನ್. ಕೆ. ಜೋಗಳೇಕರ

# ದ್ವಿತಿಯಾವೃತ್ತಿಯನ್ನು ಕುರಿತು

"ಗ್ರಹಗತಿ" ಪುಸ್ತಕದ ಪ್ರಥಮ ಮುದ್ರಣದ ಪ್ರತಿಗಳು ಮುಗಿದು ಐದು ವರ್ಷಗಳಾಗಿದ್ದು ಅನೇಕ ಜನರಿಂದ ಹೆಚ್ಚಿನ ಪ್ರತಿಗಳಿಗೆ ಬೇಡಿಕೆ ಬಂದಿದ್ದರೂ ಸಹ ಈ ವರೆಗೆ ಪುನಃರ್ಹ ಮುದ್ರಣ ಕೈಕೊಳ್ಳಲು ಸಾಧ್ಯವಾಗಿರಲಿಲ್ಲ. ಆದರೆ ಕೃಪಾಮುದ್ರಣಾಲಯದ ಒಡೆಯರಾದ ಶ್ರೀ ಎನ್. ಕೆ. ಪೊತ್ನೀಸರ ಸಹಕಾರದಿಂದ ಇದೀಗ ಪ್ರಕಟಿಸಲು ಸಾಧ್ಯವಾಯಿತು. ಅದಕ್ಕಾಗಿ ಅವರಿಗೆ ಕೃತಜ್ಞತೆ ಸಲ್ಲುತ್ತದೆ.

ಎನ್. ಕೆ. ಜೋಗಳೇಕರ
ತೇಜಸ್ವಿನಗರ, ಧಾರವಾಡ-೨

೧೪-೧-೧೯೮೧

# ಪರಿವಿಡಿ


| ಅ. ನಂ. | | ಪುಟಗಳು |
|---|---|---|
| | ವಿಷಯ ಪ್ರವೇಶ | |
| ೧ | ನಿಯತಕಾಲಿಕ ಭವಿಷ್ಯವನ್ನು ಹೇಗೆ ಬರೆಯುವರು ? ಗ್ರಹಗಳ ಗೋಚರಿಯ ಫಲಗಳು. | ೩-೩೧ |
| ೨ | ನಿಯತಕಾಲಿಕ ಭವಿಷ್ಯವನ್ನು ಹೇಗೆ ಬರೆಯಬೇಕು ? ಫಲನಿರ್ಣಯ ಹೇಗೆ ? ವರ್ಗಾನುಸಾರ ಫಲಾದೇಶ, ವಿಷಯಾನುಸಾರ ಫಲಾದೇಶ, ಅಂಶಾತ್ಮಕ ಫಲಾದೇಶ. | ೩೨-೪೪ |
| ೩ | ಗ್ರಹಗತಿಯನ್ನು ಹೇಗೆ ನೋಡಬೇಕು ? ಯಾವ ರೀತಿ ಅರ್ಥಾನ್ವಯ ಮಾಡಬೇಕು. ಸ್ಥಾನಗಳ ಮೇಲಿಂದ, ಗ್ರಹಗಳ ಮೇಲಿಂದ, ಭಾವೇಶನ ಮೇಲಿಂದ. ಗೋಚರಗ್ರಹಗಳ ಪರಿಭ್ರಮಣ, ಗ್ರಹಯೋಗ ಉದಯಾಸ್ತ ವಕ್ರೀ-ಮಾರ್ಗಿ, ದಶಾಪದ್ಧತಿ, ಇವುಗಳ ಮೇಲಿಂದ ಫಲನಿರ್ಣಯ | ೪೫-೫೭ |
| ೪ | ವೃತ್ತಪತ್ರಿಕೆಗಳಲ್ಲಿಯ ಭವಿಷ್ಯದ ವಿಭಿನ್ನತೆ ? ತಾಂತ್ರಿಕ ಹಾಗೂ ಶಾಸ್ತ್ರೀಯ ವಿವರಣೆ ಪತ್ರಿಕೋದ್ಯೋಗಿಗಳ ಹೊಣೆಗಾರಿಕೆ. | ೫೮-೬೨ |
| ೫ | ಗ್ರಹಗತಿಯ ಬಗೆಗೆ ಕೆಲವು ಅನುಭವಿಕ ನಿಯಮಗಳು ಆಯಾ ರಾಶಿಯವರಿಗೆ ಶುಭಾಶುಭ ಅವಧಿಗಳು, ಮದರಿಯ ಕುಂಡಲಿಗಳು. | ೬೩-೭೪ |




|| ಶ್ರೀ ||

# ಗ್ರಹಗತಿ

## ವಿಷಯ ಪ್ರವೇಶ

ದುಗುಡದಿಂದ ಕೂಡಿದ ಮನಸ್ಸಿಗೆ ನೆಮ್ಮದಿ ಅಗತ್ಯ. ಹಿಂದಿನ ಕಹಿ. ಇಂದಿನ ನೋವು ಇವುಗಳನ್ನು ಮರೆಯಲು ನಾಳೆಯ ಭರವಸೆ ಅತ್ಯಂತ ಸಹಾಯಕಾರಿಯಾಗುವದು. ಈ ಭರವಸೆಯನ್ನು ನೂರಕ್ಕೆ ಎಪ್ಪತ್ತರಷ್ಟು ಮಂದಿ ಜ್ಯೋತಿಷ್ಯದಿಂದ ಪಡೆಯುತ್ತಿರುವರು.

ವೃತ್ತಪತ್ರಿಕೆಗಳ ವಾಚಕರಲ್ಲಿ ಬಹಳ ಹೆಚ್ಚಿನ ಮಂದಿ ಆ ಪತ್ರಿಕೆಗಳಲ್ಲಿ ಬರುವ ನಿಯತಕಾಲಿಕ ಭವಿಷ್ಯದ ಸಲುವಾಗಿ ಚಂದಾದಾರರಾಗಿರುವರು. ಆದರೆ ತಮ್ಮ ಭವಿಷ್ಯವನ್ನು ತಿಳಿಯುವ ಆತುರವುಳ್ಳವರು ಕೇವಲ ಒಂದು ಪತ್ರಿಕೆಯನ್ನಷ್ಟೇ ನೋಡುವದಿಲ್ಲ. ಆದರೆ ಹಲವಾರು ಪತ್ರಿಕೆಗಳಲ್ಲಿ ತಮ್ಮ ರಾಶಿ ಭವಿಷ್ಯವನ್ನು ನೋಡಿ ದೃಢಮಾಡಿಕೊಳ್ಳಬಯಸುತ್ತಾರೆ. ಆದರೆ ಈ ರೀತಿ ನೋಡಿದಾಗ ಮನಸ್ಸು ದೃಢವಾಗುವದರ ಬದಲು, ಇನ್ನೂ ಹೆಚ್ಚಿನ ಗೊಂದಲಕ್ಕೊಳಗಾಗುತ್ತದೆ. ಇದಕ್ಕೆ ಕಾರಣ– ಬೇರೆ ಬೇರೆ ಪತ್ರಿಕೆಗಳಲ್ಲಿ ಒಂದೇ ರಾಶಿಯ ಮೇಲಿನ ಭವಿಷ್ಯ ಸೂಚನೆಗಳು ಬೇರೆ ಬೇರೆಯಾಗಿರುತ್ತವೆ.

ಅನೇಕ ವೇಳೆ ಒಂದು ಮತ್ತೊಂದರ ವಿರುದ್ಧವಾಗಿರುತ್ತದೆ. ಇಂತಹ ವಿರುದ್ಧ ಸೂಚನೆಗಳನ್ನು ಓದಿದ ಯಾವನೇ ಆಗಲಿ, ಅವುಗಳ ಬಗ್ಗೆ ಅಪನಂಬಿಕೆ ತಾಳದಿರಲು ಸಾಧ್ಯವಿಲ್ಲ. ಇಷ್ಟೇ ಅಲ್ಲ, ಇದರಿಂದ ವಾಚಕರಲ್ಲಿ ಜ್ಯೋತಿಷ್ಯ ಶಾಸ್ತ್ರದ ಬಗೆಗೆ ಹಾಗೂ ಜ್ಯೋತಿಷಿಗಳ ಬಗೆಗೆ ಅಪನಂಬಿಕೆ ಮೂಡುವದು ಆಶ್ಚರ್ಯವೇನಲ್ಲ.

ಈ ರೀತಿ ಗೊಂದಲಗೆಟ್ಟ ಅನೇಕ ಮಂದಿ ನನ್ನನ್ನು ಈ ಬಗ್ಗೆ ಕೇಳರುವರು. ಪತ್ರಿಕೆಗಳಲ್ಲಿಯ ಈ ಭಿನ್ನತೆಗೆ ಕಾರಣವೇನು ? ಯಾವ ಪತ್ರಿಕೆಯಲ್ಲಿ ಸರಿಯಾದ ಭವಿಷ್ಯವಿರುತ್ತದೆ ? ಯಾವ ಪತ್ರಿಕೆಯ ಚಂದಾದಾರನಾಗಬೇಕು ? ಎಂದು ಮುಂತಾಗಿ ಸುಶಿಕ್ಷಿತರು, ವ್ಯಾಪಾರಸ್ಥರು, ಅಧಿಕಾರಿಗಳು, ಪ್ರತಿಷ್ಠಿತರು, ಸಾಮಾನ್ಯರು ಎನ್ನದೆ ಎಲ್ಲ ವರ್ಗದವರೂ ಅನೇಕ ರೀತಿಯಲ್ಲಿ ನನ್ನನ್ನು ಪ್ರಶ್ನಿಸಿದ್ದಾರೆ.

ಇವುಗಳಿಗೆಲ್ಲ ನಾನು ಆಗಿಂದಾಗ್ಗೆ ವೈಯಕ್ತಿಕವಾಗಿ ಸೂಕ್ತ ಉತ್ತರ ಕೊಟ್ಟಿರುತ್ತೇನಾದರೂ, ಅದನ್ನೇ ವಿಷದವಾಗಿ ಚರ್ಚಿಸಿರುವ ಒಂದು ಪುಸ್ತಕವನ್ನೂ ಪ್ರಕಟಿಸಬೇಕೆಂದು ಈ ಕಾರ್ಯವನ್ನು ಮಾಡುತ್ತಿದ್ದೇನೆ.

ಈ ಚಿಕ್ಕ ಪುಸ್ತಕದಲ್ಲಿ ನಿಯತಕಾಲಿಕ ಭವಿಷ್ಯವನ್ನು ಹೇಗೆ ಬರೆಯಬೇಕು? ಈಗ ಯಾವ ರೀತಿ ಬರೆಯುತ್ತಿರುವರು ? ಮೇಲೆ ತಿಳಿಸಿದಂತೆ ಪತ್ರಿಕೆಗಳಲ್ಲಿ ವಿರುದ್ಧ ಸೂಚನೆಗಳು ಬರಲು ಕಾರಣವೇನು ? ಮತ್ತು ಅವುಗಳನ್ನು ಓದುವವರು ಯಾವ ರೀತಿ ಅರ್ಥಾನ್ವಯ ಮಾಡಬೇಕು ? ಎಂದು ಮುಂತಾಗಿ ವಿವೇಚಿಸಲಾಗಿದೆ.



೧

# ನಿಯತ ಕಾಲಿಕ ಭವಿಷ್ಯವನ್ನು ಹೇಗೆ ಬರೆಯುವರು ?

ನಿಯತ ಕಾಲಿಕ ಭವಿಷ್ಯವನ್ನು ಹೇಗೆ ಬರೆಯುವರು, ಗ್ರಹಗಳ ಗೋಚರೀ ಫಲಗಳಾವವು ? ನಿರ್ಧಿಷ್ಟ ಗ್ರಹಗಳ ನಿರ್ಧಿಷ್ಟ ಶುಭಾಶುಭ ಫಲಗಳಾವವು ? ಈ ಮೊದಲಾದ ಸಂಗತಿಗಳನ್ನು ಹೇಗೆ ಪರಿಶೀಲಿಸಬೇಕು ಎಂಬುದನ್ನು ಈ ಪ್ರಕರಣದಲ್ಲಿ ವಿವರಿಸಲಾಗಿದೆ.

ಸಾಮಾನ್ಯವಾಗಿ ನಾವು ಯಾವುದೊಂದು ಪತ್ರಿಕೆಯನ್ನು ನೋಡಲಾಗಿ, ನಿಯತಕಾಲಿಕ ಭವಿಷ್ಯದ ವಿಷಯಕ್ಕಾಗಿಯೇ (Column) ಮೀಸಲಿಡಲ್ಪಟ್ಟ ಪುಟವನ್ನು ನೋಡಲು ಸಿಗುವುದು. ಈ ನಿಯತಕಾಲಿಕ ಭವಿಷ್ಯಗಳಲ್ಲಿ ಪ್ರಾಮುಖ್ಯವಾಗಿ ಐದು ಪ್ರಕಾರಗಳಿವೆ. ೧) ನಿತ್ಯಭವಿಷ್ಯ ೨) ವಾರ-ಭವಿಷ್ಯ ೩) ಪಾಕ್ಷಿಕಭವಿಷ್ಯ ೪) ಮಾಸಿಕಭವಿಷ್ಯ ೫) ವರ್ಷಭವಿಷ್ಯ. ಇವುಗಳಲ್ಲಿ ವಾರಭವಿಷ್ಯ, ಮಾಸಭವಿಷ್ಯ, ವರ್ಷಭವಿಷ್ಯಗಳೇ ಹೆಚ್ಚು ಪ್ರಚಾರದಲ್ಲಿವೆ.

ಈ ನಿಯತಕಾಲಿಕ ಭವಿಷ್ಯವನ್ನು ಜನ್ಮರಾಶಿಗಳ ಮೇಲಿಂದಲೂ, ಜನ್ಮನಕ್ಷತ್ರದ ಮೇಲಿಂದಲೂ, ಜನ್ಮದಿನಾಂಕಗಳ ಮೇಲಿಂದಲೂ ಬರೆಯುವರು. ಇದರಲ್ಲಿಯೂ ಜನ್ಮರಾಶಿಗಳ ಮೇಲಿಂದಲೇ ಅನೇಕರು ಬರೆಯುತ್ತಿರುವುದನ್ನು ಕಾಣುವೆವು.

೧) ನಿತ್ಯಭವಿಷ್ಯ ಹಾಗೂ ವಾರಭವಿಷ್ಯಗಳಲ್ಲಿ, ಚಂದ್ರನ ಗೋಚರಿಯ ಚಲನಕ್ಕೆ ಹೆಚ್ಚು ಮಹತ್ವ ಕೊಡುವರು.

೨) ಮಾಸಭವಿಷ್ಯದಲ್ಲಿ ರವಿ–ಬುಧ–ಶುಕ್ರ ಇವರ ಗೋಚರೀಗತಿಗೆ ಹೆಚ್ಚು ಮಹತ್ವವನ್ನು ಕೊಡುವರು.

೩) ಪಾಕ್ಷಿಕ ಭವಿಷ್ಯಕ್ಕೆ ಮಂಗಳನ ಗೋಚರೀಗತಿಗೆ ಮಹತ್ವವನ್ನು ಕೊಡುವರು.

೪) ಶನಿ; ಗುರು; ರಾಹು; ಕೇತು ಇವುಗಳ ಗೋಚರೀ ಗತಿಗಳ ಮೇಲಿಂದ ವಾರ್ಷಿಕ ಭವಿಷ್ಯವನ್ನು ಬರೆಯುವರು.

## ಭಿನ್ನ ಭಿನ್ನ ವಿಷಯಗಳಿಗೆ ಕಾರಕ ಗ್ರಹಗಳು

ಪ್ರತಿಯೊಬ್ಬರ ಆಯುಷ್ಯದಲ್ಲಿ ಅನೇಕ ಪ್ರಕಾರದ ಸುಖ-ದುಃಖದ ಸಂಗತಿಗಳು ಜರುಗುವವು. ಈ ಸುಖ-ದುಃಖಗಳ ಸಂಬಂಧವಲ್ಲಿಯೂ ಅನೇಕ ಪ್ರಕಾರಗಳಿವೆ. ಉದಾ:— ಸಾಂಪತ್ತಿಕ ಸುಖ, ಶಾರೀರಿಕ ಸೌಖ್ಯ, ದ್ರವ್ಯಲಾಭ, ಉದ್ಯೋಗ, ನೌಕರಿ ಧಂಧೆಗಳಲ್ಲಿ ಅನುಕೂಲ ಪ್ರಗತಿ ಲಾಭ, ವಿವಾಹ, ವೈವಾಹಿಕ ಜೀವನ, ಸ್ತ್ರೀಸುಖ, ವಿದ್ಯೆ, ಭಾಗ್ಯ, ಶಿಕ್ಷಣ, ಸಂತತಿ, ಸಂತತಿಸುಖ, ರಾಜಕೀಯ, ಸಾಮಾಜಿಕ ಕಾರ್ಯ, ರಾಜಾನುಕೂಲತೆ, ಸಮಾಜಾನುಕೂಲತೆ, ಸಮಾಜ ಸನ್ಮಾನ, ಗೌರವ ಮುಂತಾದವುಗಳ ಪ್ರತಿಯೊಬ್ಬರ ಜೀವನದಲ್ಲಿ ಜರುಗುತ್ತವೆ. ಈ ಭಿನ್ನ ಭಿನ್ನ ವಿಷಯಗಳಿಗೆ ಭಿನ್ನ ಭಿನ್ನ ಗ್ರಹಗಳು ಕಾರಕರಿದ್ದು. ಗೋಚರಿಯಿಂದ ಈ ಗ್ರಹಗಳು ಶುಭ, ದಾಯಕರಾದರೆ ವಿಶಿಷ್ಟ ಶುಭಫಲಗಳನ್ನೂ, ಅಶುಭರಾಗಿ ಬಂದರೆ ವಿಶಿಷ್ಟ ಅಶುಭ ಫಲಗಳನ್ನು ಕೊಡುತ್ತವೆ. ಕಾರಣ ಯಾವ ಯಾವ ಗ್ರಹಗಳಿಗೆ ಯಾವ ವಿಷಯಗಳು ಕಾರಕವಿರುತ್ತವೆ ಎಂಬುದನ್ನು ಈ ಕೆಳಗೆ ಕೊಡಲಾಗಿದ.

**ಸಾಂಪತ್ತಿಕ ಸ್ಥಿತಿ ಹಾಗೂ ದ್ರವ್ಯಲಾಭ**— ಈ ಸಂಗತಿಗಳಿಗೆ ಗುರು, ಶುಕ್ರರು ಗೋಚರಿಯಿಂದ ಶುಭದಾಯಕರಿರಬೇಕು.

**ಶಾರೀರಿಕ ಸೌಖ್ಯ**— ಶಾರೀರಿಕ ಸೌಖ್ಯಕ್ಕಾಗಿ ಗೋಚರಿಯಿಂದ ರವಿಯು ಶುಭನಿದ್ದರೆ ಶಾರೀರಿಕ ಸೌಖ್ಯವು ಸಿಗುವದು.

**ಮಾನಸಿಕ ಸೌಖ್ಯ**— ಗೋಚರಿಯಿಂದ ಚಂದ್ರನು ಶುಭನಿದ್ದರೆ ಮಾನಸಿಕ ಸೌಖ್ಯವು ಸಿಗುವದು.

**ಕೌಟುಂಬಿಕ ಹಾಗೂ ಸ್ತ್ರೀಸುಖ**— ಶುಕ್ರನು ಗೋಚರಿಯಿಂದ ಶುಭ ದಾಯಕನಿದ್ದರೆ ಸ್ತ್ರೀ ಹಾಗೂ ಕೌಟುಂಬಿಕ ಸೌಖ್ಯ ಸಿಗುತ್ತದೆ.

ಸಂತತಿ ಹಾಗೂ ಶಿಕ್ಷಣ ( ವಿದ್ಯೆ ) ಸೌಖ್ಯ— ಗುರುವು ಗೋಚರಿ ಯಿಂದ ಶುಭದಾಯಕನಿದ್ದರೆ ಶಿಕ್ಷಣ ಹಾಗೂ ಸಂತತಿಸುಖ ಸಿಗುವದು.

ರಾಜಸನ್ಮಾನ, ಸಮಾಜದಲ್ಲಿ ಮನ್ನಣೆ— ರಾಜಸನ್ಮಾನ, ಸಮಾಜ ದಲ್ಲಿ ಮನ್ನಣೆ, ಸರಕಾರದಿಂದ ಲಾಭ, ರಾಜಕೀಯ, ಸಾಮಾಜಿಕ ಕೆಲಸದಲ್ಲಿ ಯಶ, ಈ ಮೊದಲಾದ ಸಂಗತಿಗಳಿಗಾಗಿ ಗೋಚರಿಯಿಂದ ರವಿ, ಗುರು, ಶನಿ, ಈ ಮೂರೂ ಗ್ರಹಗಳು ಶುಭದಾಯಕರಿರಬೇಕು.

ವ್ಯಾಪಾರ, ಉದ್ಯೋಗ— ವ್ಯಾಪಾರ, ಉದ್ಯೋಗ, ಸ್ವತಂತ್ರ ಉದ್ಯೋಗ ಈ ಮುಂತಾದ ವಿಷಯಗಳಲ್ಲಿ ಉತ್ಕರ್ಷಹೊಂದಲು ಬುಧ-ಶುಕ್ರರು ಗೋಚರಿಯಿಂದ ಶುಭರಿರಬೇಕು.

ನೌಕರದಾರರಿಗೆ ಪ್ರಗತಿ— ನೌಕರದಾರರಿಗೆ ಅದರಲ್ಲಿಯೂ ಸರಕಾರೀ ನೌಕರದಾರರಿಗೆ ಭಡತಿ, ಬದಲಿ, ಭಾಗ್ಯೋದಯ, ಮೇಲಧಿಕಾರಿಗಳ ಸಹಕಾರ ಮೊದಲಾದ ಸಂಗತಿಗಳಿಗಾಗಿ ಗೋಚರಿಯಿಂದ ಗುರು, ರವಿಗಳ ಶುಭಾಶುಭ ಫಲಗಳನ್ನು ನೋಡಬೇಕಾಗುತ್ತದೆ. ಅದರಲ್ಲಿಯೂ ರವಿಯ ಶುಭಾಶುಭ ಫಲಗಳೇ ಹೆಚ್ಚು.

ಕೋರ್ಟ-ಕಚೇರಿಯ ಕೆಲಸ— ಕೋರ್ಟ-ಕಚೇರಿಯ ಕೆಲಸ ವಾದ-ಸ್ಪರ್ಧೆಯಲ್ಲಿ ಜಯ, ಈ ಮುಂತಾದ ಸಂಗತಿಗಳಿಗಾಗಿ ರವಿ-ಮಂಗಳರ ಶುಭಾಶಯ ಫಲಗಳನ್ನು ನೋಡಬೇಕು.

ಲೇಖನಿ ವ್ಯವಸಾಯ— ಲೇಖನೀ ವ್ಯವಸಾಯದಲ್ಲಿ ಪ್ರಗತಿ ಮೆಟ್ಟಿಗೆಗಳಿಗಾಗಿ ಬುಧ-ಗುರುಗಳ ಗೋಚರೀ ಶುಭಾಶುಭಗಳನ್ನು ನೋಡ ಬೇಕಾಗುತ್ತದೆ.

ಆಟಪಾಟಗಳಲ್ಲಿ-ಪ್ರಗತಿ— ಕ್ರಿಕೆಟ್, ಹಾಕಿ ಮುಂತಾದ ಕ್ರೀಡಾ ಸ್ಪರ್ಧೆಗಳಲ್ಲಿ ಯಶಸ್ಸು ಹೊಂದಲು, ಗೋಚರಿಯಿಂದ ರವಿ-ಮಂಗಳರು ಶುಭದಾಯಕರಿರಬೇಕು.

## ಗೋಚರಿ ಗ್ರಹಗಳ ಶುಭಾಶುಭ ಫಲಗಳು

ಗೋಚರಿ ಗ್ರಹಗಳ ಶುಭ-ಅಶುಭ ಫಲಗಳನ್ನು ನಾವು ಮೂರು ರೀತಿಯಿಂದ ವಿಂಗಡಿಸಬಹುದು.

೧) ಗೋಚರೀ ಗ್ರಹಗಳ ಸಾಮಾನ್ಯ ಶುಭಾಶುಭ ಫಲಗಳು.

೨) ಗೋಚರೀ ಗ್ರಹಗಳ ವಿಶಿಷ್ಟ ಹಾಗೂ ಸಂಕ್ಷಿಪ್ತ ಶುಭಾಶುಭ ಫಲಗಳು

೩) ಗೋಚರೀ ಗ್ರಹಗಳ ವಿಸ್ತಾರ ಶುಭಾಶುಭ ಫಲಗಳು.

ಹೀಗೆ ನಾವು ಗೋಚರೀ ಗ್ರಹಗಳ ಫಲಗಳನ್ನು ಮೂರು ರೀತಿಯಾಗಿ ವಿಂಗಡಿಸಬಹುದು.

**ಗೋಚರಿ ಗ್ರಹಗಳ ಸಾಮಾನ್ಯ ಶುಭ-ಅಶುಭ ಫಲಗಳು**

ಮೊದಲನೆಯದಾಗಿ ರವ್ಯಾದಿ ನವಗ್ರಹಗಳ ಗೋಚರೀ ಗತಿಯ ಫಲಗಳು ಈ ಕೆಳಗಿನಂತಿರುತ್ತವೆ.

ರವಿ— ರವಿಯು ಗೋಚರಿಯಿಂದ ೩-೬-೧೦-೧೧ ನೆಯವನಾಗಿ ಬಂದರೆ ಶುಭ ಫಲವನ್ನು ಕೊಡುವನು. ೧-೪-೮-೧೨ ನೆಯವನಾಗಿ ಬಂದರೆ ಅಶುಭ ಫಲವನ್ನು ಕೊಡುವನು. ೨-೫-೭-೯ನೆಯವನಾಗಿ ಬಂದರೆ ಶುಭಾಶುಭ ಮಿಶ್ರಿತ ಫಲವನ್ನು ಕೊಡುವನು.

ಚಂದ್ರ— ಚಂದ್ರನು ಗೋಚರಿಯಿಂದ ೨-೩-೫-೭-೯-೧೧ ನೆಯವನಾಗಿ ಬಂದರೆ ಶುಭ ಫಲವನ್ನೂ, ೧-೭-೧೦ ನೆಯವನಾಗಿ ಬಂದರೆ ಶುಭಾಶುಭಗಳ ಮಿಶ್ರಿತ ಫಲವನ್ನೂ, ೪-೬-೮-೧೨ ನೆಯವನಾಗಿ ಬಂದರೆ ಅಶುಭ ಫಲವನ್ನೂ ಕೊಡುವನು.

ಮಂಗಳ— ಮಂಗಳನು ಗೋಚರಿಯಿಂದ ೩-೬-೧೦-೧೧ ನೆಯವನಾಗಿ ಬಂದರೆ ಶುಭ ಫಲವನ್ನೂ, ೨-೫-೭-೯ ನೆಯವನಾಗಿ ಬಂದರೆ ಶುಭಾಶುಭಗಳ ಮಿಶ್ರಿತ ಫಲವನ್ನೂ, ೧-೪-೮-೧೨ ನೆಯವನಾಗಿ ಬಂದರೆ ಅಶುಭ ಫಲವನ್ನೂ ಕೊಡುವನು.

ಬುಧ— ಬುಧನು ಗೋಚರಿಯಿಂದ ೨-೩-೫-೭-೯-೧೧ ನೆಯವನಾಗಿ ಬಂದರೆ ಶುಭಫಲವನ್ನೂ, ೧-೧೦ ನೆಯವನಾಗಿ ಬಂದರೆ ಶುಭಾಶುಭ ಮಿಶ್ರಿತ ಫಲವನ್ನೂ, ೪-೬-೮-೧೨ ನೆಯವನಾಗಿ ಬಂದರೆ ಅಶುಭ ಫಲವನ್ನೂ ಕೊಡುವನು.

**ಗುರು—** ಗುರು ಗೋಚರಿಯಿಂದ ೨-೫-೭-೯-೧೧ ನೆಯವನಾಗಿ ಬಂದರೆ ಶುಭ ಫಲವನ್ನೂ, ೧-೩-೧೦ ನೆಯವನಾಗಿ ಬಂದರೆ ಶುಭಾಶುಭ ಮಿಶ್ರಿತ ಫಲವನ್ನೂ, ೪-೬-೮-೧೨ ನೆಯವನಾಗಿ ಬಂದರೆ ಅಶುಭ ಫಲವನ್ನೂ ಕೊಡುವನು.

**ಶುಕ್ರ—** ಶುಕ್ರನು ಗೋಚರಿಯಿಂದ ೧-೨-೪-೫-೭-೯-೧೧ ನೆಯವನಾಗಿ ಬಂದರೆ ಶುಭ ಫಲವನ್ನೂ, ೧೦-೧೨ ನೆಯವನಾಗಿ ಬಂದರೆ ಶುಭಾಶುಭ ಮಿಶ್ರಿತ ಫಲವನ್ನೂ, ೩-೬-೮ ನೆಯನವನಾಗಿ ಬಂದರೆ ಅಶುಭ ಫಲವನ್ನೂ ಕೊಡುವನು.

**ಶನಿ—** ಶನಿಯು ಗೋಚರಿಯಿಂದ ೩-೬-೧೦-೧೧ ನೆಯವನಾಗಿ ಬಂದರೆ ಶುಭ ಫಲವನ್ನೂ, ೭-೯ ನೆಯವನಾಗಿ ಬಂದರೆ ಶುಭಾಶುಭ ಮಿಶ್ರಿತ ಫಲವನ್ನೂ, ೧-೨-೪-೫-೮-೧೨ ನೆಯವನಾಗಿ ಬಂದರೆ ಅಶುಭ ಫಲವನ್ನೂ ಕೊಡುವನು.

**ರಾಹು-ಕೇತು—** ರಾಹು-ಕೇತುಗಳ ಫಲಗಳೂ ಕೂಡ ಶನಿಯಂತೆ ಇರುತ್ತವೆ.

ಶುಭಾಶುಭ ಮಿಶ್ರಿತ ಫಲಗಳಲ್ಲಿ ಶುಭ ಫಲಗಳ ಪ್ರಮಾಣವು ಹೆಚ್ಚಾಗಿರುತ್ತವೆ. ವಾಚಕರು ಇದನ್ನು ಗಮನಿಸಬೇಕು.

## ಗೋಚರಿ ಗ್ರಹಗಳ ವಿಶಿಷ್ಟ ಹಾಗೂ ಸಂಕ್ಷಿಪ್ತ ಶುಭಾಶುಭ ಫಲಗಳು

**ರವಿಯ ಗೋಚರಿಯ ಸಂಕ್ಷಿಪ್ತ ಫಲಗಳು—** ರವಿಯು ಗೋಚರಿಯಿಂದ ೨ನೆಯ ಹಾಗೂ ೫ನೆಯವನಾಗಿ ಬಂದಾಗ, ವಿಶೇಷವಾಗಿ ದ್ರವ್ಯ ಚಿಂತೆಯನ್ನುಂಟು ಮಾಡುವನು. ದ್ರವ್ಯ ಚಿಂತೆ— ಇದನ್ನು ವಿಸ್ತಾರವಾಗಿ ಹೇಳಬೇಕೆಂದರೆ ಆರ್ಥಿಕ ಅಡಚಣೆ, ಆರ್ಥಿಕ ತುಟಾಗ್ರತೆ, ( Scarcity of money ) ಅಧಿಕ ಖರ್ಚು— ಮೊದಲಾದ ಹಣಕಾಸಿನ ವಿಷಯದಲ್ಲಿ ಚಿಂತೆಯನ್ನೂ, ೧-೪-೮-೧೨ ನೆಯವನಾಗಿ ಬಂದರೆ ಶಾರೀರಿಕ ಪೀಡೆ, ರೋಗ ಬಾಧೆ, ರೋಗ ವೃದ್ಧಿ ಇತ್ಯಾದಿ ದೈಹಿಕ ತೊಂದರೆಯನ್ನು ಕೊಡುವನು.

೭–೯ ನೆಯವನಾಗಿ ಬಂದಾಗ ಕೌಟುಂಬಿಕ ತೊಂದರೆಯನ್ನೂ, ಪತಿ–ಪತ್ನಿ ಹಾಗೂ ಮಕ್ಕಳ ಆರೋಗ್ಯಕ್ಕೆ ಹಾನಿ ಮುಂತಾದ ಪೀಡೆ ಕೊಡುವನು. ರವಿಯು ಗೋಚರಿಯಿಂದ ೪–೮–೧೨ ನೆಯವನಾಗಿ ಬಂದರೆ ಅನೇಕ ತರದ ಪೀಡೆ-ಶತ್ರು ಪೀಡೆ, ವ್ಯಾಪಾರ–ಉದ್ಯೋಗಗಳಲ್ಲಿ ಹಾನಿ ಮೊದಲಾದ ಸಂಗತಿಗಳು ಜರುಗುವವು. ರವಿಯು ೩–೬–೧೦–೧೧ನೆಯವನಾಗಿ ಬಂದಾಗ ಉದ್ಯೋಗ, ಧಂಧೆ, ನೌಕರಿಯಲ್ಲಿ ಪ್ರಗತಿ, ಉತ್ಕರ್ಷ, ಜನಾನುಕೂಲತೆ ರಾಜಕೀಯ ಸಾಮಾಜಿಕ ಕಾರ್ಯದಲ್ಲಿ ಯಶಸ್ಸು— ಮೊದಲಾದ ವಿಶಿಷ್ಟ ಫಲಗಳನ್ನು ಕೊಡುವನು.

**ಚಂದ್ರನ ಗೋಚರಿಯ ಸಂಕ್ಷಿಪ್ತ ಫಲ**

ಚಂದ್ರನು ಗೋಚರಿಯಿಂದ ೧–೨–೩ ನೆಯವನಾಗಿ ಬಂದಾಗ ಆಪ್ತೇಷ್ಟರ ಭೆಟ್ಟಿ, ಸುದ್ದಿ, ಸಮಾಚಾರ, ಸಂದರ್ಶನ, ಮಹತ್ವದ ಪತ್ರಾಗಮನ, ಸುಗ್ರಾಸ ಹಾಗೂ ಮೃಷ್ಟಾನ್ನ ಭೋಜನವನ್ನೂ ಕೊಡುವನು.

ಚಂದ್ರನು ಗೋಚರಿಯಿಂದ ೮–೧೨ನೆಯವನಾಗಿ ಬಂದಾಗ ಆರೋಗ್ಯ ಹಾಗೂ ಮಾನಸಿಕ ದೃಷ್ಟಿಯಿಂದ ಹಾನಿಕಾರಕನು.

೪–೬ ನೆಯವನಾಗಿ ಬಂದಾಗ ಕೌಟುಂಬಿಕ ವಿರಸ ಶತ್ರುಕಾಟ, ಹಣದ ಅಡಚಣೆಯನ್ನುಂಟು ಮಾಡುವನು.

೭–೯ ನೆಯವನಾಗಿ ಬಂದಾಗ ಕೌಟುಂಬಿಕ ಸೌಖ್ಯವನ್ನೂ, ೫-೧೧ನೆಯವನಾಗಿ ಬಂದಾಗ ಆರ್ಥಿಕ ಲಾಭವನ್ನೂ, ೧೦ ನೆಯವನಾಗಿ ಬಂದರೆ ಉದ್ಯೋಗದಲ್ಲಿ ಪ್ರಗತಿಯನ್ನೂ ಕೊಡುವನು. ೧–೩–೭–೯ ನೆಯವನಾಗಿ ಬಂದಾಗ ಪ್ರವಾಸಸೌಖ್ಯ ಲಭಿಸುವದು.

**ಮಂಗಳನ ಗೋಚರಿಯ ಸಂಕ್ಷಿಪ್ತ ಫಲಗಳು**

ಮಂಗಳನು ಗೋಚರಿಯಿಂದ ೧–೮–೧೨ನೆಯವನಾಗಿ ಬಂದಾಗ ಶಾರೀರಿಕ ಪೀಡೆಯನ್ನು, ಅದರಲ್ಲಿಯೂ ಅಷ್ಟಮ ಮಂಗಳನು ಶತ್ರುಪೀಡೆ,

ಕಲಹ ಹೆಚ್ಚು ಕೊಡುತ್ತಿದ್ದರೆ, ೧, ೧೨ನೆಯ ಮಂಗಳನು ರೋಗವೃದ್ಧಿ, ಶಾರೀರಿಕ ಪೀಡೆಯನ್ನು ಕೊಡುವನು.

೬. ೧೦ ನೆಯ ಮಂಗಳನು ಉದ್ಯೋಗದಲ್ಲಿ ಅನುಕೂಲತೆ, ವಾದ, ಸ್ಪರ್ಧೆ, ಕೋರ್ಟು-ಕಚೇರಿ ಕೆಲಸಗಳಲ್ಲಿ ಪ್ರಚಂಡ ಯಶಸ್ಸನ್ನು ಕೊಡುವನು. ಅದರಲ್ಲಿಯೂ ೬ನೆಯ ಮಂಗಳನು ವಾದಸ್ಪರ್ಧೆಯಲ್ಲಿ ಜಯವನ್ನೂ, ೧೦ನೆಯ ಮಂಗಳನು ಉದ್ಯೋಗದಲ್ಲಿ ಜಯವನ್ನೂ ಕೊಡುವನು.

೩, ೧೧ನೆಯ ಮಂಗಳನು ದ್ರವ್ಯಲಾಭ, ಕೀರ್ತಿ, ಯಶ, ಕೊಡುವನು.

೨, ೪ ನೆಯ ಮಂಗಳನಿಂದ ಕೌಟುಂಬಿಕ ಸುಖಕ್ಕೆ ಎರವಾಗುವನು. ಅದರಲ್ಲಿಯೂ ೪ನೆಯ ಮಂಗಳನು ಸಮೀಪದ ಬಳಗದ ಬಾಂಧವ್ಯದಲ್ಲಿ ಬಾಧಕಾರಕನು ಆಗಿದ್ದರೆ, ೨ನೆಯ ಮಂಗಳನು ದೂರದ ಸಂಬಂಧ ಹಾಗು ಮಿತ್ರರಲ್ಲಿ ಅಸೌಖ್ಯ, ಅಸಮಾಧಾನವನ್ನುಂಟು ಮಾಡುವನು.

### ಬುಧನ ಗೋಚರಿಯ ಸಂಕ್ಷಿಪ್ತ ಫಲಗಳು

ಬುಧನು ಗೋಚರಿಯಿಂದ ೬-೮-೧೨ ನೆಯವನಾಗಿ ಬಾದರೆ, ವ್ಯಾಪಾರ-ಉದ್ಯೋಗಗಳಲ್ಲಿ, ನೌಕರಿಯಲ್ಲಿ ಹಾನಿಯನ್ನೂ, ಶತ್ರುವೃದ್ಧಿಯನ್ನೂ, ಮಾನಸಿಕ ವಿಕಾರವನ್ನೂ, ಆರ್ಥಿಕ ಅಡಚಣೆಯನ್ನೂ ಉಂಟು ಮಾಡುವನು.

ಬುಧನು ೨-೩-೫-೧೧ ನೆಯವನಾಗಿ ಬಂದರೆ ವ್ಯಾಪಾರ-ಉದ್ಯೋಗ, ನೌಕರಿಯಲ್ಲಿ ಪ್ರಗತಿಯನ್ನೂ, ಹೇರಳ ಹಣ ಸಂಗ್ರಹವನ್ನೂ, ಆಕಸ್ಮಿಕ ಧನ ಲಾಭವನ್ನೂ ಕೊಡುವನು. ವಿಶೇಷವಾಗಿ ದ್ರವ್ಯಾನುಕೂಲತೆಯನ್ನು ಕೊಡುವನು.

ಬುಧನು ೧ ೭-೯-೧೦ ನೆಯವನಾಗಿ ಬಂದರೆ ಆರ್ಥಿಕ ದೃಷ್ಟಿಯಿಂದ ತೃಪ್ತಿದಾಯಕನಿದ್ದರೂ, ಪ್ರವಾಸ, ವಿಲಾಸಮಯ ವಸ್ತುಗಳ ಸಂಗ್ರಹ, ಆಕಸ್ಮಿಕ ಖರ್ಚಿನ ಪ್ರಸಂಗವನ್ನು ತರುವನು.

### ಗುರುವಿನ ಗೋಚರಿಯ ಸಂಕ್ಷಿಪ್ತ ಫಲಗಳು

ಗೋಚರಿಯಿಂದ ಗುರುವು ೪-೮ ೧೨ ನೆಯವನಾಗಿ ಬಂದರೆ ಆರೋಗ್ಯ ಹಾಗೂ ಕೌಟುಂಬಿಕ ದೃಷ್ಟಿಯಿಂದ ಅಶುಭದಾಯಕನು. ಅದರಲ್ಲಿಯೂ

ಅಷ್ಟಮ ಗುರುವು ಕೌಟುಂಬಿಕ ವಿರಸವನ್ನೂ ಗೃಹಕಲಹವನ್ನೂ ಮೊದಲಾದ ಫಲಗಳನ್ನು ಕೊಡುತ್ತಿದ್ದರೆ, ಹನ್ನೆರಡನೆಯ ಗುರುವು ಆರೋಗ್ಯ ಹಾಗೂ ಔದ್ಯೋಗಿಕ ದೃಷ್ಟಿಯಿಂದ ಅಶುಭಕಾರಕನು. ನಾಲ್ಕನೆಯ, ಹಾಗು ಆರನೆಯ ಗುರುವು ಆರ್ಥಿಕ ದೃಷ್ಟಿಯಿಂದ ಅಶುಭದಾಯಕನು, ಅದರಲ್ಲಿಯೂ ಸ್ಥಾವರ ಇಸ್ಟೇಟ್ ಮತ್ತು ಕೋರ್ಟು-ಕಚೇರಿಯ ಕೆಲಸಗಳಲ್ಲಿ ಅಶುಭದಾಯಕನು.

ಗುರುವು ಗೋಚರಿಯಿಂದ ೩, ೫, ೭, ೯, ೧೧ನೆಯವನಾಗಿ ಬಂದರೆ ಆರ್ಥಿಕ ದೃಷ್ಟಿಯಿಂದಲೂ, ಶೈಕ್ಷಣಿಕ ದೃಷ್ಟಿಯಿಂದಲೂ, ಮಾನಸಸ್ವಾಸ್ಥ್ಯದಿಂದಲೂ, ಕೌಟುಂಬಿಕ ಹಾಗು ಸಂತಾನ ದೃಷ್ಟಿಯಿಂದಲೂ ಶುಭದಾಯಕನು. ಅದರಲ್ಲಿಯೂ ಐದು, ಹನ್ನೊಂದನೆಯ ಗುರುವು ಆರ್ಥಿಕ ದೃಷ್ಟಿಯಿಂದಲೂ, ಏಳು, ಒಂಬೊತ್ತನೆಯ ಗುರುವು ಕೌಟುಂಬಿಕ ಹಾಗೂ ವೈವಾಹಿಕ ದೃಷ್ಟಿಯಿಂದಲೂ, ಎರಡು, ಐದು, ಹನ್ನೊಂದನೆಯ ಗುರುವು ಶೈಕ್ಷಣಿಕ ದೃಷ್ಟಿಯಿಂದಲೂ ಅನುಕೂಲನು.

ಗೋಚರಿಯಿಂದ ೧, ೭, ೯ ನೆಯ ಗುರುವು ದೂರದ ಪ್ರವಾಸವನ್ನೂ ಪ್ರವಾಸಮಯ ಜೀವನವನ್ನೂ, ತೀರ್ಥಯಾತ್ರಾ, ಸಂದರ್ಶನಾದಿಗಳನ್ನೂ, ಉದ್ಯೋಗ, ಆರ್ಥಿಕ ಹಾಗೂ ವಾಸಸ್ಥಳಗಳಲ್ಲಿ ಆಕಸ್ಮಿಕ ಬದಲಾವಣೆಯನ್ನೂ ಕೊಡುವನು.

ಮೂರನೆಯ ಹಾಗು ಹತ್ತನೆಯ ಗುರುವು ಉದ್ಯೋಗ, ಆರ್ಥಿಕ ಮೊದಲಾದ ಯಾವುದರಲ್ಲಿಯೂ ವಿಕಸಿತವಾಗದೆ ಇದ್ದದ್ದನ್ನು ಕಾಯ್ದುಕೊಳ್ಳುವಿಕೆಯನ್ನು ಕೊಡುವನು.

ಶುಕ್ರನ ಗೋಚರಿಯ ಸಂಕ್ಷಿಪ್ತ ಫಲಗಳು

ಶುಕ್ರನು ಗೋಚರಿಯಿಂದ ೧-೩-೯-೧೧ ನೆಯವನಾಗಿ ಬಂದರೆ, ಆರ್ಥಿಕ ಹಾಗೂ, ಔದ್ಯೋಗಿಕ ಕೌಟುಂಬಿಕ, ವೈವಾಹಿಕ ದೃಷ್ಟಿಯಿಂದ ಶುಭದಾಯಕನು. ಅದರಲ್ಲಿಯೂ ೧. ೩, ೧೧ ನೆಯ ಶುಕ್ರನು ಆರ್ಥಿಕ ಹಾಗೂ ಔದ್ಯೋಗಿಕ ದೃಷ್ಟಿಯಿಂದ ಶುಭದಾಯಕನಿದ್ದರೆ, ನಾಲ್ಕು, ಏಳು, ಒಂಬತ್ತನೆಯ ಶುಕ್ರನು ಕೌಟುಂಬಿಕ ದೃಷ್ಟಿಯಿಂದ ಶುಭದಾಯಕನು.

ಶುಕ್ರನು ಗೋಚರಿಯಿಂದ ಮೂರು. ಆರು ಎಂಟನೇಯವನಾಗಿ, ಬಂದರೆ-ಆರೋಗ್ಯ, ಕೌಟುಂಬಿಕ, ಔದ್ಯೋಗಿಕ ದೃಷ್ಟಿಯಿಂದ ಅಶುಭ ದಾಯಕನು. ಹಾಗೂ ಪ್ರತಿಕೂಲಸಂಗತಿಯನ್ನು ಕೊಡುವನು. ಅದರಲ್ಲಿಯೂ ಅಷ್ಟಮ ಶುಕ್ರನು ಕೌಟುಂಬಿಕ ವಿರಸವನ್ನೂ, ಸ್ತ್ರೀ-ಸೌಖ್ಯಕ್ಕೆ ವಿಘ್ನವನ್ನೂ ತರುತ್ತಿದ್ದರೆ, ಆರನೇಯ ಶುಕ್ರನು ಶತ್ರು-ಪ್ರಾಬಲ್ಯ, ರೋಗಬಾಧೆಯನ್ನೂ, ಅನಾವಶ್ಯಕ ಖರ್ಚಿನ ಪ್ರಸಂಗವನ್ನೂ ತರುವನು. ತೃತೀಯ ಶುಕ್ರನು ಅತಿಶಯ ಖರ್ಚನ್ನು ಮಾತ್ರ ತರುವನು.

ಗೋಚರಿಯಿಂದ ಏಳು, ಹತ್ತು, ಹನ್ನೆರಡನೇಯ ಶುಕ್ರನು ಕೌಟುಂಬಿಕ ದೃಷ್ಟಿಯಿಂದ ಅನುಕೂಲನಿದ್ದರೂ, ಶುಭಾಶುಭ ಮಿಶ್ರಿತ ಫಲವನ್ನು ಕೊಡುವನು. ಸ್ತ್ರೀಸೌಖ್ಯ ಉತ್ತಮ; ಆದರೆ ಕೌಟುಂಬಿಕ ವಿರಸವನ್ನೂ, ದೂರದ ಪ್ರವಾಸವನ್ನೂ, ಸ್ಥಳಾಂತರವನ್ನೂ ಬಂಧು ಬಳಗದವರ ಭೆಟ್ಟಿಯನ್ನೂ ಕೊಡುವನು.

ಶನಿಯು ಗೋಚರಿಯ ಸಂಕ್ಷಿಪ್ತ ಫಲಗಳು :–

ಶನಿಯು ಗೋಚರಿಯಿಂದ ಮೂರು, ಆರು, ಹತ್ತು, ಹನ್ನೊಂದನೆಯವನಾಗಿ ಬಂದರೆ ಶುಭಫಲವನ್ನು ಕೊಡುವನು; ಅದರಲ್ಲಿಯೂ ಹತ್ತು. ಹನ್ನೊಂದನೇಯ ಶನಿಯು ಆರ್ಥಿಕ, ಔದ್ಯೋಗಿಕ, ಮಾನ ಸನ್ಮಾನ, ದೃಷ್ಟಿಯಿಂದ ಪ್ರಗತಿದಾಯಕನಿದ್ದರೆ, ಆರನೇಯ ಶನಿಯು ಕೇವಲ ಔದ್ಯೋಗಿಕ ದೃಷ್ಟಿಯಿಂದ ಅನಕೂಲನು; ಆದರೆ ಮೂರನೇಯ ಶನಿಯು ಶತ್ರು-ನಿರ್ನಾಮ ಹಾಗೂ ಕೋರ್ಟು-ಕಚೇರಿಯ ಕೆಲಸದಲ್ಲಿ ಯಶಸ್ಸು ಕೊಡುವನು.

ನಾಲ್ಕು, ಎಂಟು, ಹನ್ನೆರಡನೇಯ ಶನಿಯು ಆರೋಗ್ಯಕ್ಕೆ ಹಾಗೂ ಆರ್ಥಿಕ, ಔದ್ಯೋಗಿಕ, ಕೌಟುಂಬಿಕ ಎಲ್ಲ ದೃಷ್ಟಿಯಿಂದಲೂ ಅಶುಭ ದಾಯಕನು; ಅದರಲ್ಲಿಯೂ ಹನ್ನೆರಡನೇಯ ಹಾಗೂ ಎಂಟನೇಯ ಶನಿಯು ಶಾರೀರಿಕ ಪೀಡೆಯನ್ನೂ ಕೌಟುಂಬಿಕ ವಿರಸವನ್ನೂ ತರುತ್ತಿದ್ದರೆ, ನಾಲ್ಕು ಹಾಗೂ ಜನ್ಮಸ್ಥ, ಮತ್ತು ಪಂಚಮ ಶನಿಯು ಔದ್ಯೋಗಿಕ ಹಾಗೂ ಆರ್ಥಿಕ ದೃಷ್ಟಿ

ಯಿಂದ ಅಶುಭದಾಯಕನು; ಎರಡನೇಯ ಶನಿಯು ಕೇವಲ ಆರ್ಥಿಕ ದೃಷ್ಟಿ ಯಿಂದ ಪ್ರತಿಕೂಲನು.

## ಗೋಚರೀ ಗ್ರಹಗಳ ವಿಸ್ತಾರ ಫಲ

**ರವಿಯ ಗೋಚರಿಯ ವಿಸ್ತಾರ ಫಲ :-**

೧) ರವಿಯು ಗೋಚರಿಯಿಂದ ಜನ್ಮಸ್ಥನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು —

ಸ್ವಭಾವದಲ್ಲಿ ಅಸ್ಥಿರತೆ, ಚಂಚಲತೆ, ತಾಮಸ ಗುಣದ ವೃದ್ಧಿ, ಪರಾಕ್ರಮ ಕೆಲಸದಲ್ಲಿ ತೊಡಗುವಿಕೆ, ಪಿತ್ತವಿಕಾರ, ಉಷ್ಣವಿಕಾಳ, ಪ್ರವಾಸ, ಓಡಾಟ, ನೌಕರಿ ವರ್ಗದವರಿಗೆ ಬದಲೀಯೋಗ, ಜನ ಸಾಮಾನ್ಯರ ಮೇಲೆ ಪ್ರಭಾವ-ಈ ಮೊದಲಾದ ಸಂಗತಿಗಳು ಜರುಗುವವು.

೨) ರವಿಯು ಗೋಚರಿಯಿಂದ ದ್ವಿತೀಯನಾಗಿ ಬಂದರೆ ಈ ಕೆಳಗಿನಂತೆ ಫಲ ಕೊಡುವನು—

ದ್ರವ್ಯಚಿಂತೆ, ಮನಸ್ತಾಪ, ಕಲಹ, ಶಾರೀರಿಕ ಅಸ್ವಸ್ಥತೆ, ಅವಿಶ್ರಾಂತಿ, ಭ್ರಮಣ, ನೇತ್ರದೋಷ, ಪ್ರಾಪಂಚಿಕ ವಿರಸ ಈ ಮೊದಲಾದ ಸಂಗತಿ ಗಳು ಜರುಗುವವು.

೩) ರವಿಯು ಗೋಚರಿಯಿಂದ ೩ನೇಯವನಾಗಿ ಬಂದರೆ ಈ ಕೆಳಗಿನಂತೆ ಫಲ ಕೊಡುವನು—

ಪರಾಕ್ರಮ ಕೆಲಸದಲ್ಲಿ ಯಶಸ್ಸು, ಯಾವುದೇ ಕಾರ್ಯದಲ್ಲಿ ಯಶ, ಮಾನ ಸನ್ಮಾನ, ದ್ರವ್ಯಲಾಭ, ಅಲ್ಪ ಪ್ರವಾಸ, ಶತ್ರು ನಾಶ, ಯಾವದೊಂದು ಕೆಲಸಲ್ಲಿ ಪ್ರಗತಿ, ವ್ಯಾಜ್ಯದಲ್ಲಿ ಜಯ, ಸಾಮಾಜಿಕ ಕೆಲಸದಲ್ಲಿ ಯಶಸ್ಸು ಮೊದಲಾದ ಸಂಗತಿಗಳು ಜರುಗುವವು.

೪) ರವಿಯು ಗೋಚರಿಯಿಂದ ನಾಲ್ಕನೇಯವನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಉದ್ವಿಗ್ನತೆ, ಗುಪ್ತಶತ್ರು ನಿರ್ಮಾಣ, ಕೆಲಸದಲ್ಲಿ ಹಾನಿ, ರೋಗವೃದ್ಧಿ, ವೃದ್ಧಿ, ಸ್ವಜನವಿರೋಧ, ಅನಾವಶ್ಯಕ ಖರ್ಚು, ಕಷ್ಟಕರ ಸಂಗತಿ ಮುಂತಾದವು ಜರಗುವವು.

೫) ರವಿಯು ಗೋಚರಿಯಿಂದ ೫ನೇಯವನಾಗಿ ಬಂದರೆ ಈ ಕೆಳಗಿನಂತೆ ಫಲಗಳು ಸಿಗುವವು—

ಅಧಿಕ ಖರ್ಚು, ಆಕಸ್ಮಿಕ ಖರ್ಚಿನ ಪ್ರಸಂಗ, ಬುದ್ಧಿಯಲ್ಲಿ ತೀಕ್ಷ್ಣತೆ ತಾಮಸ ಸ್ವಭಾವ, ಪ್ರಾಪಂಚಿಕ ಸೌಖ್ಯಕ್ಕೆ ವಿಘ್ನ ಮೊದಲಾದವು ಜರಗುವವು.

೬) ರವಿಯು ಗೋಚರಿಯಿಂದ ೬ನೇಯವನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಶತ್ರುನಾಶ, ಯಾವದೇ ಕೆಲಸದಲ್ಲಿ ಯಶಸ್ಸು, ದ್ರವ್ಯಲಾಭ, ವ್ಯಾಪಾರ, ಉದ್ಯೋಗ, ನೌಕರಿಯಲ್ಲಿ ಪ್ರಗತಿ, ಅನುಕೂಲ, ಶತ್ರುಗಳು ಮಿತ್ರ ರಾಗುವರು, ಬಹುದಿನಗಳಿಂದ ಆಗದೇ ಇದ್ದ ಕೆಲಸಗಳಲ್ಲಿ ಯಶಸ್ಸು., ಮಾನಸನ್ಮಾನ, ಜನಾನುಕೂಲತೆ, ಸರಕಾರ ಹಾಗೂ ಸಮಾಜದವರಿಂದ ಅನುಕೂಲ.

೭) ರವಿಯು ಗೋಚರಿಯಿಂದ ೭ನೇಯವನಾಗಿ ಬಂದಾಗ ಈ ಕೆಳಗಿನಂತೆ ಫಲ ಕೊಡುವನು—

ಪ್ರವಾಸ, ತೀರ್ಥಯಾತ್ರಾಯೋಗ, ನೌಕರದಾರರಿಗೆ ಬದಲೀ, ಓಡಾಟ, ಸ್ತ್ರೀಪೀಡೆ, ಶತ್ರುಪೀಡೆ, ಸ್ವಜನ ಶತ್ರು, ಕೌಟುಂಬಿಕ ವಿರಸ ಮೊದಲಾದ ಫಲಗಳು ಸಿಗುವವು.

೮) ರವಿಯು ಗೋಚರಿಯಿಂದ ಅಷ್ಟಮನಾಗಿ ಬಂದರೆ ಈ ಕೆಳಗಿನಂತೆ ಫಲಗಳು ಕೊಡುವನು—

ಅನೇಕ ಪ್ರಕಾರದ ಸಂಕಟ ದ್ರವ್ಯದಲ್ಲಿ ಹಾನಿ, ಕಳವು-ತುಡುಗುಗಳ ಭೀತಿ, ಶಾರೀರಿಕ ಅಸ್ವಸ್ಥತೆ, ಬುದ್ಧಿಭ್ರಂಶ, ಮಾನಹಾನಿ, ಸರಕಾರ ಹಾಗೂ ಸಮಾಜ-ವರ್ಗದವರಿಂದ ಪ್ರತಿಕೂಲ, ಉದ್ಯೋಗ, ನೌಕರಿ ಯಲ್ಲಿ ತೊಂದರೆ, ಮುಂತಾದವು ಜರುಗುವವು.

೯) ರವಿಯು ಗೋಚರಿಯಿಂದ ೯ನೇಯುವನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಧಾರ್ಮಿಕ ವಿಷಯಗಳ ಬಗ್ಗೆ ಸದ್ಭಾವನೆ, ಕೈಕೊಂಡ ಕೆಲಸಗಳಲ್ಲಿ ಅರ್ಥ ಯಶ, ಸ್ಥಳಾಂತರ, ದೂರದ ಪ್ರವಾಸ, ನೌಕರಿ ವರ್ಗದವರಿಗೆ ಬದಲೀ ಯೋಗ, ಚಿಂತಾತುರತೆ, ಓಡಾಟ ಈ ಮೊದಲಾದ ಫಲಗಳು ಲಭಿಸುವವು.

೧೦) ರವಿಯು ಗೋಚರಿಯಿಂದ ದಶಮನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಮಾನ-ಸನ್ಮಾನ, ಅಧಿಕಾರಪ್ರಾಪ್ತಿ, ಪ್ರತಿಷ್ಠಿತರ ಹಾಗೂ ಶ್ರೀಮಂತರ ಸ್ನೇಹ, ಕೈಕೊಂಡ ಕೆಲಸ ಕೈಗೂಡುವಿಕೆ, ದ್ರವ್ಯ ಲಾಭ, ಸರಕಾರ ಹಾಗೂ ಸಮಾಜದಿಂದ ಸನ್ಮಾನ, ಉತ್ತಮ ಆರೋಗ್ಯ.

೧೧) ರವಿಯು ಗೋಚರಿಯಿಂದ ಹನ್ನೊಂದನೇಯವನಾಗಿ ಬಂದರೆ ಈ ಕೆಳಗಿನಂತೆ ಫಲಗಳು ಲಭಿಸುವವು—

ಅನೇಕ ಮುಖಗಳಿಂದ ದ್ರವ್ಯಾಗಮನ, ದ್ರವ್ಯಲಾಭ, ಉದ್ಯೋಗ, ಧಂದೆ, ನೌಕರಿಗಳಲ್ಲಿ ಲಾಭ, ಯಶ, ಗೌರವ, ರಾಜಕೀಯ ಹಾಗೂ ಸಾಮಾಜಿಕ ಕೆಲಸಗಳಲ್ಲಿ ಯಶಸ್ಸು, ವಾದ-ಸ್ಪರ್ಧೆಯಲ್ಲಿ ಜಯ, ಮಿತ್ರ ಲಾಭ, ಅಮೌಲ್ಯವಸ್ತು ಲಾಭ, ಯಾವತ್ತೂ ಕಾರ್ಯಗಳದಲ್ಲಿ ಜಯ.

೧೨) ರವಿಯು ಗೋಚರಿಯಿಂದ ಹನ್ನೆರಡನೇಯುವನಾಗಿ ಬಂದರೆ ಈ ಕೆಳಗಿನಂತೆ ಫಲವನ್ನು ಕೊಡುವನು—

ಯಾವದೇ ಕೆಲಸದಲ್ಲಿ ಹಿನ್ನಡೆ, ಅಪಯಶ, ಉದ್ಯೋಗ, ಧಂದೆ, ನೌಕರಿಯಲ್ಲಿ ಹಾನಿ, ವಾದಸ್ಪರ್ಧೆಯಲ್ಲಿ ಅಪಜಯ, ( ಕೋರ್ಟು, ಕಚೇರಿ ಕೆಲಸಗಳಲ್ಲಿ ಹಾನಿ ), ಶತ್ರುಭಯ, ದ್ರವ್ಯಚಿಂತೆ, ನೌಕರಿ ವರ್ಗದವರಿಗೆ ಹಿಂಬಡತಿ, ನಿರುದ್ಯೋಗ, ಕಲಹ, ಮನಸ್ತಾಪ, ರೋಗವೃದ್ಧಿ, ಶಾರೀರಿಕ ಪೀಡೆ, ಪ್ರವಾಸ, ಫೌಜದಾರಿಯ

ಪ್ರಸಂಗೆ, ಸಾಮಾಜಿಕ ಹಾಗೂ ರಾಜಕೀಯ ಕಾರ್ಯಕರ್ತರಿಗೆ (Honorary workers, Social and Politcial workers) ವಿಶೇಷ ಹಾನಿ.

ಚಂದ್ರನ ಗೋಚರಿಯ ವಿಸ್ತಾರ ಫಲ :—

೧) ಚಂದ್ರನು ಜನ್ಮಸ್ಥನಾಗಿ ಬಂದಾಗ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಚಂಚಲ ಮನಸ್ಸು, ಉತ್ತಮ ಆರೋಗ್ಯ, ಸಮಾಧಾನಕಾರಕ ಸಂಗತಿ, ಅಲ್ಪ ಪ್ರವಾಸ, ಪ್ರವಾಸದ ಇಚ್ಛೆ, ಸ್ತ್ರೀಸುಖ, ಲಾಭ, ಅನೇಕ ವಸ್ತುಗಳ ಪ್ರಾಪ್ತಿ, ಮೃಷ್ಟಾನ್ನ ಭೋಜನ, ಸುವಾರ್ತೆ, ಬಂಧು ಬಳಗದ ಭೇಟಿ.

೨) ಚಂದ್ರನು ಗೋಚರಿಯಿಂದ ಎರಡನೆಯವನಾಗಿ ಬಂದಾಗ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಧನಲಾಭ, ದ್ರವ್ಯಸಂಚಯ, ಕೌಟುಂಬಿಕ ಸೌಖ್ಯ, ಕಾರ್ಯಸಿದ್ಧಿ, ಆನಂದದಾಯಕ ಸಂಗತಿ, ಮಿತ್ರಪ್ರೇಮ, ಬಂಧುಬಳಗದ ಭೆಟ್ಟಿ, ಮಹತ್ವದ ಪತ್ರಾಗಮನ, ಸುಗ್ರಾಸ ಭೋಜನ, ಪ್ರತಿಷ್ಠೆ, ಸ್ತ್ರೀಸೌಖ್ಯ, ವ್ಯಾಪಾರೋದ್ಯೋಗಗಳಲ್ಲಿ ಜನಾನುಕೂಲತೆ, ದೈವಾನುಕೂಲತೆ.

೩) ಚಂದ್ರನು ಗೋಚರಿಯಿಂದ ತೃತೀಯನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಅಲ್ಪ ಪ್ರವಾಸ, ಮಹತ್ವದ ಪತ್ರಾಗಮನ, ಬಂಧು-ಬಳಗದವರ ಭೆಟ್ಟಿ, ಚಿಂತಾಕಾರಕ ಸ್ಥಿತಿ, ಅನ್ನಲಾಭ, ಧಾರ್ಮಿಕ ಕಾರ್ಯದಲ್ಲಿ ತೊಡಗುವಿಕೆ, ನೌಕರಿ, ಉದ್ಯೋಗ-ದಂಧೆಗಳಲ್ಲಿ ಉತ್ಕರ್ಷ ಮುಂತಾದವುಗಳು.

೪) ಚಂದ್ರನು ಗೋಚರಿಯಿಂದ ಚತುರ್ಥನಾಗಿ ಬಂದರೆ ಈ ಕೆಳಗಿನಂತೆ ಫಲಗಳು ಲಭಿಸುವವು—

ಮಾನಸಿಕ ಉದಾಸೀನತೆ, ಸಂತಾಪ, ಕಾರ್ಯದಲ್ಲಿ ಹಿನ್ನಡೆ, ಕುಗ್ಗು, ಕಾರ್ಯಹಾನಿ ಶತ್ರುಭಯ, ಶಾರೀರಿಕ ಪೀಡೆ ಉದ್ಯೋಗದಲ್ಲಿ ಹಾನಿ, ಕೌಟುಂಬಿಕ ವಿರಸ, ಗೃಹಸೌಖ್ಯದ ಅಭಾವ.

೫) ಚಂದ್ರನು ಗೋಚರಿಯಿಂದ ಪಂಚಮನಾಗಿ ಬಂದರೆ ಈ ಕೆಳಗಿನಂತೆ ಸಂಗತಿಗಳು ಜರುಗುತ್ತವೆ—

ಯಾವದೊಂದು ಕೆಲಸದಲ್ಲಿ ಲಾಭ, ಹರ್ಷದಾಯಕ ಸಂಗತಿಗಳು, ವಾದಸ್ಪರ್ಧೆಯಲ್ಲಿ ಜಯ, ವಿದ್ಯೆ-ಬುದ್ಧಿಯಲ್ಲಿ ಯಶ. ಮಾನ-ಸನ್ಮಾನ, ಸ್ತ್ರೀಸೌಖ್ಯ, ಗುರುಹಿರಿಯರ, ಮಿತ್ರರ ಲಾಭ, ಚಿಂತಾನಾಶ.

೬) ಚಂದ್ರನು ಗೋಚರಿಯಿಂದ ಆರನೆಯವನಾಗಿ ಬಂದರೆ ಈ ಕೆಳಗಿ ಫಲಗಳು ಸಿಗುವವು—

ಶಾರೀರಿಕ ಅಸ್ವಸ್ಥತೆ, ಅಪಘಾತ, ಅನೇಕ ಆಪತ್ತುಗಳು, ಶತ್ರುಪೀಡೆ, ಕೊಡಕೊಳ್ಳುವಿಕೆಯಿಂ ಕಿರುಕಳ, ಉಪದ್ರವ - ಸ್ತ್ರೀ - ಸಂಬಂಧದಲ್ಲಿ ಯಾಗಲೀ ಸ್ತ್ರೀಯರೊಡನೆ ಕಲಹ, ಗುಪ್ತಚಿಂತೆ, ಕೌಂಟುಂಬಿಕ ವಿರಸ, ಬುದ್ಧಿಭ್ರಂಶ, ಉದ್ಯೋಗ-ದಂಧೆಯಲ್ಲಿ ಹಾನಿ.

೭) ಚಂದ್ರನ, ಗೋಚರಿಯಿಂದ ೭ ನೆಯವನಾಗಿ ಬಂದರೆ ಈ ಕೆಳಗಿನಂತೆ ಫಲಗಳು ಸಿಗುವವು—

ವಾದ, ಸ್ಪರ್ಧೆ, ಕೋರ್ಟು ಕಚೇರಿಗಳಲ್ಲಿ ಯಶಸ್ಸು, ಪ್ರವಾಸ, ನೌಕರಿ ವರ್ಗದವರಿಗೆ ಬದಲಿ, ಸ್ತ್ರೀ ಸುಖ. ಕೌಟುಂಬಿಕ ಸುಖ, ಮನಸ್ಸ ಪಫುಲ್ಲಿತ, ಆರೋಗ್ಯ ಉತ್ತಮ, ವ್ಯವಹಾರದಲ್ಲಿ ಲಾಭ.

೮) ಚಂದ್ರನು ಅಷ್ಟಮನಾಗಿ ಬಂದರೆ ಈ ಕೆಳಗಿನಂತೆ ಫಲಗಳು ಸಿಗುವವು—

ಅಸಮಾಧಾನಕಾರಕ ಸಂಗತಿ, ಆರ್ಥಿಕ ಚಿಂತೆ, ಸಾಲ ಹಾಗೂ ಕೈಗಡ ಕೊಟ್ಟವರ ಕಾಟ, ಪೀಡೆ, ಉಪದ್ರವ, ಆಪತ್ತು, ಶಾರೀರಿಕ ಪೀಡೆ, ರೋಗವೃದ್ಧಿ, ನಿರಂತರ ಕಲಹ, ಶತ್ರುಪಕ್ಷದವರಿಗೆ ಯಶಸ್ಸು.

೯) ಚಂದ್ರನು ನವಮನಾಗಿ ಬಂದರೆ ಈ ಕೆಳಗಿನಂತೆ ಫಲಗಳು ಲಭಿಸುವವು—

ದೂರದ ಪ್ರವಾಸ, ಸತ್ಕರ್ಮ, ಪ್ರಯತ್ನದಲ್ಲಿ ಯಶ, ಕಾರ್ಯಸಿದ್ಧಿ, ಉದ್ಯೋಗದಲ್ಲಿ ಯಶ, ದ್ರವ್ಯಲಾಭ, ತೀರ್ಥಯಾತ್ರಾ ಸಂದರ್ಶನ.

೧೦) ಚಂದ್ರನು ದಶಮನಾಗಿ ಬಂದರೆ ಈ ಕೆಳಗಿನಂತೆ ಫಲಗಳು ಸಿಗುವವು—

ವಾಹನ ಸುಖ, ಮನಸ್ಥಿರತೆ, ಉದ್ಯೋಗದಲ್ಲಿ ಕೀರ್ತಿ, ಯಶಸ್ಸು, ಪ್ರತಿಷ್ಠೆ, ಗೌರವ, ಹೊಲ-ಮನೆಗಳ ಸೌಖ್ಯ, ಸ್ಥಾವರ ಇಸ್ಟೇಟಿನ ಸೌಖ್ಯ, ಅಮೂಲ್ಯ ವಸ್ತುವಿನ ಖರೀದಿ-ವಿಕ್ರಯಿಂದ ಲಾಭ.

೧೧) ಚಂದ್ರನು ಗೋಚರಿಯಿಂದ ಏಕಾದಶನಾಗಿ ಬಂದಾಗ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಎಲ್ಲ ವಿಷಯದಲ್ಲಿಯೂ ಲಾಭ, ಬೆಲೆಯುಳ್ಳ ವಸ್ತುಗಳ ಪ್ರಾಪ್ತಿ ಇಲ್ಲವೆ ಖರೀದಿ, ಮಿತ್ರ ಸುಖ, ದ್ರವ್ಯಲಾಭ, ಸಂಚಯ, ಅಧಿಕಾರ ಲಾಭ, ಮನೋರಥ ಈಡೇರುವಿಕೆ, ಸಂತತಿಸುಖ, ಕೌಟುಂಬಿಕ ಸೌಖ್ಯ.

೧೨) ಚಂದ್ರನು ೧೨ನೇಯವನಾಗಿ ಬಂದರೆ ಈ ಕೆಳಗಿನ ಫಲಗಳನು ಕೊಡುವನು—

ಕಷ್ಟ ಹಾಗೂ ದುಃಖಕಾರಕ ಸಂಗತಿಗಳು, ಮಿಥ್ಯಾಪವಾದ, ವ್ಯಥಾ-ರೋಪ, ಶತ್ರು ಭಯ, ಕಲಹ, ಶಾರೀರಿಕ ಪೀಡೆ ಹಾಗೂ ವೇದನೆ ಆರ್ಥಿಕ ಚಿಂತೆ, ಅಪಮಾನ, ಗುಪ್ತಶತ್ರು, ಅಪಘಾತ, ರೋಗ-ವೃದ್ಧಿ ಈ ಮೊದಲಾದ ಸಂಗತಿಗಳು ಜರುಗುತ್ತವೆ.

ಮಂಗಳನ ಗೋಚರಿಯ ವಿಸ್ತಾರ ಫಲಗಳು

೧) ಮಂಗಳನು ಜನ್ಮಸ್ಥನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು

ಉಷ್ಣವಾತ, ವಾತವಿಕಾರ, ಶಾರೀರಿಕ ಪೀಡೆ, ಮನಸ್ಸು ಅಸಮಾಧಾನ,
ಅಭಿಮಾನ ಹೆಚ್ಚುವದು, ಪರಪೀಡೆ ಹಾಗೂ ಉಪದ್ರವ, ಸ್ತ್ರೀಪೀಡೆ,
ಮಾತೃ ಸೌಖ್ಯಕ್ಕೆ ಅಭಾವ, ಕಾರ್ಯವಿಲಂಬ, ಆರ್ಥಿಕ ಹಾನಿ.

೨) ಮಂಗಳನು ೨ ನೆಯವನಾಗಿ ಬಂದರೆ ಈ ಕೆಳಗಿನ ಫಲಗಳನ್ನು ಕೊಡುವನು—

ಶರೀರಪೀಡೆ, ಜ್ವರಪೀಡೆ, ಕೌಟುಂಬಿಕ ಕಲಹ, ಹಾಗೂ ವಿರಸ,
ವಿರೋಧ, ದ್ರವ್ಯನಾಶ, ಚಿಂತಾತುರತೆ, ಋಣ ಹಾಗೂ ವ್ರಣಪೀಡೆ,
ಉದ್ಯೋಗದಲ್ಲಿ ಹಾನಿ, ವಾದಸ್ಪರ್ಧೆಯಲ್ಲಿ ಅಯಶಸ್ಸು.

೩) ಮಂಗಳನು ತೃತೀಯನಾಗಿ ಬಂದರೆ ಈ ಕೆಳಗಿನಂತೆ ಫಲ ಕೊಡುವನ—

ಅಲ್ಪಪ್ರವಾಸ, ಯಾವದೇ ಕೆಲಸದಲ್ಲಿ ಯಶಸ್ಸು, ಪರಾಕ್ರಮ ಹಾಗೂ
ಧೈರ್ಯದ ಕೆಲಸದಲ್ಲಿ ಪ್ರಚಂಡ ಜಯ, ಬಂಧುಪ್ರೇಮ, ಸ್ವಜನಪ್ರೇಮ,
ಉದ್ಯೋಗದಲ್ಲಿ ಪ್ರಗತಿ, ವಾದಸ್ಪರ್ಧೆಯಲ್ಲಿ ಯಶ, ಶತ್ರುನಾಶ.

೪) ಮಂಗಳನು ಚತುರ್ಥನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಮಾನಸಿಕ ಚಿಂತೆ, ಸ್ವಜನವಿರೋಧ, ಶತ್ರುಬಲ, ಧಾರ್ಮಿಕ ವಿಷಯ
ದಲ್ಲಿ ಅಶ್ರದ್ಧೆ, ಜಿಗುಪ್ಸೆ, ಶಾರೀರಿಕ ಪೀಡೆ, ದುರ್ಜನಸಂಗ, ದ್ರವ್ಯಹಾನಿ,
ಉದ್ಯೋಗದಲ್ಲಿ ಹಿನ್ನಡೆ.

೫) ಮಂಗಳನು ೫ನೇಯವನಾಗಿ ಬಂದರೆ ಈ ಕೆಳಗಿನಂತೆ ಫಲ ಕೊಡುವನು—

ವಿಪರೀತ ಬುದ್ಧಿ, ತೀವ್ರ ಶ್ರಮ, ಉದ್ಯೋಗ–ಧಂದೆಯಲ್ಲಿ ಹಾನಿ,
ವ್ಯಾಪಾರ–ಉದ್ಯೋಗ ಹಾಗೂ ಕೌಟುಂಬಿಕ ಸಂಗತಿಗಳಲ್ಲಿ ಮಹತ್ವದ
ಬದಲಾವಣೆ, ಖರ್ಚು ಹೆಚ್ಚು, ದ್ರವ್ಯ ಚಿಂತೆ, ಋಣ–
ಯೋಗ ಉದರಪೀಡೆ, ಶಾರೀರಿಕ ಅಸ್ವಸ್ಥತೆ, ಅವಿಚಾರ ಕೃತಿ

೬) ಮಂಗಳನು ೬ನೇಯವನಾಗಿ ಬಂದರೆ ಈ ಕೆಳಗಿನ ವಿಷಯ ಗಳು ಜರಗುವವು—

ವಾದ, ಸ್ಪರ್ಧೆ, ಕೋರ್ಟು-ಕಚೇರಿಗಳ ಕೆಲಸಗಳಲ್ಲಿ ಯಶಸ್ಸು, ನೌಕರಿ, ಉದ್ಯೋಗಗಳಲ್ಲಿ ಯಶ, ಲಾಭ, ಸ್ವಜನ-ಶ್ರೇಷ್ಠತೆ, ಮುಂದಾಳು ಮುದಾಗುವಿಕೆ, ಪರಾಕ್ರಮ-ಕೆಲಸದಲ್ಲಿ ಯಶಸ್ಸು, ಆಕಸ್ಮಿಕ ಹಾಗೂ ಅನಿಯಮಿತ ಲಾಭ.

೭) ಮಂಗಳನು ಗೋಚರಿಯಿಂದ ೭ನೇಯವನಾಗಿ ಬಂದರೆ ಈ ಕೆಳಗಿ ನಂತೆ ಫಲಗಳನ್ನು ಕೊಡುವನು—

ದ್ರವ್ಯಚಿಂತೆ, ಅಡಚಣೆ, ಸ್ತ್ರೀಪಿಡೆ, ಕೌಟುಂಬಿಕ ವಿರಸ, ಉದ್ಯೋಗದಲ್ಲಿ ಹಾನಿ, ಕಲಹ.

೮) ಮಂಗಳನು ಗೋಚರಿಯಿಂದ ಅಷ್ಟಮನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಲೋಕಾಪವಾದ, ಜನಾಪವಾದ, ಅನಾಚಾರ, ಅಪಕೀರ್ತಿ, ಗುಪ್ತ ರೋಗ, ಗುಹ್ಯಸ್ಥಾನದಲ್ಲಿ ಪೀಡೆ, ವೇದನೆ, ರಕ್ತದೋಷ, ಅಗ್ನಿಭಯ, ಚೋರ ಭಯ, ಅಪಘಾತ, ಶಾರೀರಿಕ ಪೀಡೆ, ಫೌಜದಾರೀ ಪ್ರಸಂಗ, ಕೌಟುಂಬಿಕ ಕಲಹ, ದ್ರವ್ಯಹಾನಿ, ವಾದಸ್ಪರ್ಧೆಯಲ್ಲಿ ಅಪಯಶಸ್ಸು ಮುಂತಾದ ಫಲ ಗಳು ಜರಗುವವು.

೯) ಮಂಗಳನು ನವಮನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಮೂತ್ರಪೀಡೆ, ವಾಹನ-ಭೀತಿ, ಭಾಗ್ಯೋದಯಕ್ಕೆ ವಿಘ್ನ, ಬಂಧು ವರ್ಗದಿಂದ ಉಪದ್ರವ, ಧಾರ್ಮಿಕ ಕೆಲಸಗಳಿಗೆ ಅಡಚಣೆ.

೧೦) ಮಂಗಳನು ದಶಮನಾಗಿ ಬಂದರೆ ಈ ಕೆಳಗಿನಂತೆ ಫಲ ಕೊಡು ವನು—

ಕೀರ್ತಿ, ಯಶಸ್ಸು, ಮಾನಸನ್ಮಾನ, ಐಶ್ವರ್ಯ, ವೈಭವ, ಅಧಿಕಾರ ಪ್ರಾಪ್ತಿ, ದ್ರವ್ಯಲಾಭ, ಉದ್ಯೋಗ, ನೌಕರಿಯಲ್ಲಿ ಸೌಖ್ಯ, ಎಲ್ಲ ರೀತಿ ಯಿಂದಲೂ ಅನುಕೂಲ.

೧೧) ಮಂಗಳನು ಗೋಚರಿಯಿಂದ ೧೧ ನೇಯವನಾಗಿ ಬಂದಾಗ ಈ ಕೆಳಗಿನ ಫಲ ಕೊಡುವನು—

ಸರಕಾರದಿಂದ ಸಹಾಯ, ಮಹತ್ವಾಕಾಂಕ್ಷೆ ಈಡೇರುವಿಕೆ, ಯಾವದೊಂದು ಕೆಲಸದಲ್ಲಿ ಮುಂದಾಳತನ ಶತ್ರುನಾಶ, ವಾದಸ್ಪರ್ಧೆ, ಕೋರ್ಟ-ಕಚೇರಿ ಕೆಲಸಗಳಲ್ಲಿ ಯಶಸ್ಸು, ಜನಾನುಕೂಲತೆ, ದ್ರವ್ಯಲಾಭ, ಉದ್ಯೋಗ-ನೌಕರಿಯಲ್ಲಿ ಉತ್ಕರ್ಷ.

೧೨) ಮಂಗಳನು ೧೨ ನೇಯವನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಅತಿಶಯ ಖರ್ಚು, ಕೌಟುಂಬಿಕ ವಿರಸ, ಅನೇಕ ಪ್ರಕಾರದ ಸಂಕಟ, ಚೋರಭಯ, ಅಗ್ನಿಭಯ, ಉದ್ಯೋಗ ನೌಕರಿಯಲ್ಲಿ ಹಾನಿ, ರೋಗವೃದ್ಧಿ, ಶರೀರಪೀಡೆ, ಅಪಘಾತ, ಚಿಂತೆ ಹಾಗೂ ಉದ್ವಿಗ್ನಕಾರಕ ಸ್ಥಿತಿ, ಸ್ವಜನವಿರೋಧ.

## ಬುಧನ ಗೋಚರಿಯು ವಿಸ್ತಾರ ಫಲಗಳು

೧) ಬುಧನು ಗೋಚರಿಯಿಂದ ಜನ್ಮಸ್ಥನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಸೌಂದರ್ಯದಲ್ಲಿ ಹೆಚ್ಚಳ, ಸ್ತ್ರೀ-ಪುತ್ರ ಸೌಖ್ಯ, ವ್ಯಾಪಾರ, ಉದ್ಯೋಗ, ಧಂಧೆ, ನೌಕರಿಯಲ್ಲಿ ಯಶಸ್ಸು, ಲೇಖನಿ ಕೆಲಸದಲ್ಲಿ ಯಶಸ್ಸು, ಮಾತುಗಾರಿಕೆಯ ಪ್ರಭಾವ, ದ್ರವ್ಯ ಸಂಚಯ.

೨) ಬುಧನು ಗೋಚರಿಯಿಂದ ದ್ವಿತಿಯನಾಗಿ ಬಂದರೆ-ತೀವ್ರ ಬುದ್ಧಿ, ಸ್ವಜನ ಪ್ರೇಮ, ದ್ರವ್ಯಸಂಚಯ, ಸುಗ್ರಾಸ ಭೋಜನ, ಅನೇಕ ಬೆಲೆಯುಳ್ಳ ವಸ್ತು-ಪದಾರ್ಥಗಳ ಪ್ರಾಪ್ತಿ, ನೌಕರಿ, ಧಂಧೆ, ಉದ್ಯೋಗದಲ್ಲಿ ಜಯ, ಲಾಭ, ವ್ಯಾಪಾರೀ ಹಾಗೂ ಲೇಖನೀ ವರ್ಗದವರಿಗೆ ವಿಶೇಷ ವಿಶೇಷ ಲಾಭ-ಇತ್ಯಾದಿ ಫಲಗಳು ಜರಗುತ್ತವೆ.

೩) ಬುಧನು ಗೋಚರಿಯಿಂದ ತೃತೀಯನಾಗಿ ಬಂದರೆ ಈ ಕೆಳಗಿನಂತೆ ಫಲ ಕೊಡುವನು—

ಬಂಧು, ಭಗಿನಿಯರ ಸಾಖ್ಯ ಭಾಗ್ಯವೃದ್ಧಿ, ಸಂಗಡಿಗರ ಸಹಕಾರ, ಪ್ರತಿಷ್ಠೆತೆ. ಯಾವುದೇ ಕೆಲಸದಲ್ಲಿ ಯಶಸ್ಸು, ದ್ರವ್ಯಲಾಭ, ವ್ಯಾಪಾರ, ಉದ್ಯೋಗ, ನೌಕರಿಯಲ್ಲಿ ಅನುಕೂಲ.

೪) ಬುಧನು ಚತುರ್ಥನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಧನ, ಧಾನ್ಯಸಮೃದ್ಧಿ, ಮಿತ್ರಲಾಭ, ವಾಹನಸೌಖ್ಯ, ಉದ್ಯೋಗದಲ್ಲಿ ಉತ್ಕರ್ಷ, ವೈಭವಕಾಲ.

೫) ಬುಧನು ೫ ನೆಯವನಾಗಿ ಬಂದರೆ ಈ ಕೆಳಗಿನಂತೆ ಫಲಗಳು ಲಭಿಸುವವು—

ವಿದ್ವಾನ್ ಹಾಗೂ ಗುಣೀ ಜನರ ಪರಿಚಯ, ಉದ್ಯೋಗ, ಧಂಧೆ, ನೌಕರಿಯಲ್ಲಿ ಲಾಭ, ಲೇಖನೀ ವ್ಯವಸಾಯದಲ್ಲಿ ಯಶಸ್ಸು, ಮಾತುಗಾರಿಕೆಯ ಪ್ರಭಾವ, ಮಾನಸನ್ಮಾನ, ಅಧಿಕಾರ-ಪ್ರಾಪ್ತಿ, ಸಂತತಿ ಹಾಗೂ ಕೌಟುಂಬಿಕ ಸೌಖ್ಯ, ದ್ರವ್ಯಸಂಚಯ.

೬) ಬುಧನು ಗೋಚರಿಯಿಂದ ಆರನೆಯವನಾಗಿ ಬಂದರೆ ಈ ಕೆಳಗಿನ ಫಲಗಳನ್ನು ಕೊಡುವನು—

ಶತ್ರುವೃದ್ಧಿ, ರೋಗಬಾಧೆ ಶಾರೀರಿಕ ಪೀಡೆ, ಅಶಕ್ತತೆ, ನಾನಾ ಸಂಕಟಗಳಿಂದ ಜರ್ಜರಿತ, ಚಿಂತಾಗ್ರಸ್ತ ಮನೋವಿಕಾರ, ಆರ್ಥಿಕ ಹಾನಿ.

೭) ಬುಧನು ಸಪ್ತಮನಾಗಿ ಬಂದರೆ ಈ ಕೆಳಗಿನ ಫಲಗಳನ್ನು ಕೊಡುವನು—

ಸ್ತ್ರೀ, ಪುತ್ರಸಾಖ್ಯ ಆರೋಗ್ಯ ಉತ್ತಮ, ಹರ್ಷ ದಾಯಕ ವಾರ್ತೆ, ದೂರ ಪ್ರವಾಸ. ವ್ಯವಹಾರಕೌಶಲ್ಯ ಅನೇಕ ವಸ್ತು ಸಂಗ್ರಹ, ಲೇಖನದಲ್ಲಿ ಪ್ರಗತಿ, ದ್ರವ್ಯಸಂಚಯ.

೮) ಬುಧನು ಅಷ್ಟಮನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡವನು—

ಕುಷ್ಟರೋಗ, ರೋಗವೃದ್ಧಿ, ಕ್ಲೇಶ, ತ್ರಿದೋಷಪೀಡೆ, ಮಾನ ಹಾನಿ ಉದ್ಯೋಗದಲ್ಲಿ ಹಾನಿ, ಪರಾವಲಂಬನ, ವಿಪತ್ತು. ಶತ್ರು ಭಯ. ಮಾನಸಿಕ ಕ್ಲೇಶ, ಮುಂತಾದವು ಜರುಗುತ್ತವೆ.

೯) ಬುಧನು ೯ ನೆಯವನಾಗಿ ಬಂದರೆ ಈ ಕೆಳಗಿನಂತೆ ಫಲಗಳು ಜರುಗ್ತವೆ—

ಉದ್ಯೋಗದಲ್ಲಿ ಪ್ರಗತಿ, ಆರ್ಥಿಕ ಹೆಚ್ಚಳ, ಪ್ರವಾಸ, ನೌಕರೀ ವರ್ಗ-ದವರಿಗೆ ಬದಲಿ, ಮಂಗಲಕಾರ್ಯ, ಸತ್ಕರ್ಮ, ಕೌಟುಂಬಿಕ ಸೌಖ್ಯ, ಭಾಗ್ಯೋದಯ, ಕೀರ್ತಿಕಾರಕ ಘಟನೆ.

೧೦) ಬುಧನು ೧೦ ನೆಯನಾಗ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ವಾಹನ ಸೌಖ್ಯ ಹೊಲಮನೆ ಸೌಖ್ಯ ದ್ರವ್ಯಲಾಭ. ಮಾನ ಸನ್ಮಾನ, ನೌಕರೀ ಧಂಧೆ, ಉದ್ಯೋಗದಲ್ಲಿ ಹೆಚ್ಚಳ, ಬೆಲೆಯುಳ್ಳ ವಸ್ತುಗಳ ಪ್ರಾಪ್ತಿ, ಉದ್ಯೋಗದಲ್ಲಿ ಸ್ಥಿರತೆ, ಮಿತ್ರಪ್ರೇಮ.

೧೧) ಬುಧನು ಗೋಚರಿಯಿಂದ ೧೧ ನೆಯವನಾಗಿ ಬಂದರೆ ಈ ಕೆಳಗಿನ ಫಲಗಳನ್ನು ಕೊಡುವನು—

ಅನೇಕ ಪ್ರಕಾರದಿಂದ ದ್ರವ್ಯಸಂಚಯ, ದ್ರವ್ಯಲಾಭ ಬೆಲೆಯುಳ್ಳ ವಸ್ತುಗಳ ಪ್ರಾಪ್ತಿ, ಮಿತ್ರಲಾಭ, ಉದ್ಯೋಗ ಧಂಧೆ. ನೌಕರಿಯಲ್ಲಿ ಯಶಸ್ಸು, ವಾಹನಸೌಖ್ಯ, ವಾದ ಸ್ಪರ್ಧೆಯಲ್ಲಿ ಯಶಸ್ಸು, ಲೇಖನ ವ್ಯವಸಾಯದಲ್ಲಿ ಅನುಕೂಲ ಮಾತುಗಾರಿಕೆ ಪ್ರಭಾವ, ಸ್ಥಾನ ಶ್ರೇಷ್ಠತೆ.

೧೨) ಬುಧನು ಗೋಚರಿಯಿಂದ ೧೨ ನೆಯವನಾಗಿ ಬಂದರೆ ಈ ಕೆಳಗಿನಂತೆ ಫಲ ಕೊಡುವನು—

ಹೀನಬುದ್ಧಿ, ಅನೈತಿಕ ಸಂಗತಿ. ಶತ್ರು ಪ್ರಾಬಲ್ಯ ವಾದವಿವಾದ

ಕೋರ್ಟು ಕಚೇರಿ ಕೆಲಸಗಳಲ್ಲಿ ಹಾನಿ, ಮಾನಸಿಕ ವಿಕಾರ, ದ್ರವ್ಯ-ಚಿಂತೆ, ವ್ಯಾಪಾರ-ಉದ್ಯೋಗದಲ್ಲಿ ಹಿನ್ನಡೆ.

## ಗುರುವಿನ ಗೋಚರಿಯ ವಿಸ್ತಾರ ಫಲಗಳು

(೧) ಗುರುವು ಗೋಚರಿಯಿಂದ ಜನ್ಮಸ್ಥನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಸಾಮಾನ್ಯವಾಗಿ ೧೨ ವರ್ಷಗಳಿಗೊಮ್ಮೆ ಜನ್ಮಸ್ಥನಾಗಿ ಬರುವ ಗುರುವಿನ ಪರಿಣಾಮವು ಜೀವನದಲ್ಲಿ ಮಹತ್ವದ ಬದಲಾವಣೆಯನ್ನುಂಟುಮಾಡುತ್ತದೆ. ಉದ್ಯೋಗ, ವ್ಯವಸಾಯ, ಮಾಡತಕ್ಕ ಕಾರ್ಯ, ಇರತಕ್ಕ ಸ್ಥಳ, ( change of place, change of jobs, change of nature of work, change of profession ) ಮೊದಲಾದ ಎಲ್ಲ ರೀತಿಯ ಬದಲಾವಣೆಗಳಾಗುತ್ತವೆ. ಅರಿಕ್ತ ಔದ್ಯೋಗಿಕ, ಸಾಮಾಜಿಕ, ಕೌಟುಂಬಿಕ, ರಾಜಕೀಯ ಮೊದಲಾದ ಎಲ್ಲ ರಂಗಗಳಲ್ಲಿ ಬದಲಾವಣೆ ಕೊಡುತ್ತಾನೆ. ಪ್ರವಾಸ, ಪರದೇಶಗಮನ, ತೀರ್ಥಯಾತ್ರಾ-ಯೋಗ, ನೂತನ ಕಾರ್ಯ ಕೈಕೊಳ್ಳುವಿಕೆ, ಕೌಟುಂಬಿಕ ಸೌಖ್ಯ, ಸ್ತ್ರೀಸೌಖ್ಯ ಮುಂತಾದವುಗಳು.

(೨) ಗುರುವು ಗೋಚರಿಯಿಂದ ೨ನೆಯವನಾಗಿ ಬಂದರೆ ಈ ಕೆಳಗಿನಂತೆ ಸಂಗತಿಗಳು ಲಭಿಸುವವು—

ದ್ರವ್ಯಸಂಚಯ, ಸ್ತ್ರೀಸುಖ, ಕೌಟುಂಬಿಕ ಸುಖ, ವಿದ್ಯೆ-ಶಿಕ್ಷಣದಲ್ಲಿ ಯಶಸ್ಸು, ಪ್ರಗತಿ, ಉದ್ಯೋಗದಲ್ಲಿ ಉತ್ಕರ್ಷ, ಮಾನ-ಸನ್ಮಾನ, ಸತ್ಕರ್ಮ, ವಿಶೇಷವಾಗಿ ವಿದ್ಯೆ ಹಾಗೂ ಆರ್ಥಿಕದಲ್ಲಿ ಹೆಚ್ಚಿನ ಅನುಕೂಲತೆ ಕೊಡುವನು.

(೩) ಗುರುವು ಗೋಚರಿಯಿಂದ ತೃತೀಯನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಸ್ವಜನ ಹಾಗೂ ಸ್ವಜಾತೀ ವರ್ಗದವರಿಂದ ಸನ್ಮಾನ, ಸ್ಥಳಾಂತರ,

ಪ್ರವಾಸ, ನೌಕರೀ ವರ್ಗದವರಿಗೆ ಬದಲೀ ಯೋಗ, ಬಂಧು ಬಳಗದ
ವರಿಗೆ ಮಾನ-ಸನ್ಮಾನ, ದ್ರವ್ಯಾನುಕೂಲತೆ, ವಾದ ಸ್ಪರ್ಧೆಯಲ್ಲಿ
ಜಯ ಮೊದಲಾದ ಸಂಗತಿಗಳು ಜರುಗುವವು.

(೪) ಗುರುವು ಗೋಚರಿಯಿಂದ ಚತುರ್ಥನಾಗಿ ಬಂದರೆ ಈ
ಕೆಳಗಿನಂತೆ ಫಲಗಳನ್ನು ಕೊಡುತ್ತಾನೆ—

ಹೊಲ-ಮನೆ, ಸ್ಥಾವರ ಇಷ್ಟೇಟ್, ಜಮೀನ-ಜಂಗಮ ಈ ವಿಷಯ
ಗಳಲ್ಲಿ ಅಡಚಣೆ, ವಿಘ್ನ, ಚಿಂತೆ, ಹೃದಯರೋಗದ ಭೀತಿ, ಶಾರೀ
ರಿಕಪೀಡೆ, ರೋಗವೃದ್ಧಿ, ಕೌಟುಂಬಿಕ ಕಲಹ, ವ್ಯಾಪಾರ-ಉದ್ಯೋ
ಗದಲ್ಲಿ ಹಾನಿ, ದ್ರವ್ಯಚಿಂತೆ, ಕಾರ್ಯವಿಲಂಬ, ಮೊದಲಾದ
ಫಲಗಳು ದೊರಕುವವು.

(೫) ಗುರುವು ಗೋಚರಿಯಿಂದ ಪಂಚಮನಾಗಿ ಬಂದರೆ ಈ ಕೆಳ
ಗಿನ ಫಲಗಳು ಲಭಿಸುವವು—

ಸಂತತಿ ಪ್ರಾಪ್ತಿ, ಸಂತತಿ ಸುಖ, ವಿದ್ಯೆಯಲ್ಲಿ ಪ್ರಗತಿ, ರಾಜಾನು-
ಕೂಲತೆ, ಜನಾನುಕೂಲತೆ, ಉದ್ಯೋಗ, ನೌಕರಿಯಲ್ಲಿ ಉತ್ಕರ್ಷ,
ಕೌಟುಂಬಿಕ – ಸ್ತ್ರೀಸೌಖ್ಯ, ಅಧಿಕಾರ – ಪ್ರಾಪ್ತಿ, ಯಾವದೇ
ಉದ್ಯೋಗದಲ್ಲಿ ಯಶಸ್ಸು, ಅನುಕೂಲತೆ, ಭಾಗ್ಯೋದಯ ಕಾಲ

(೬) ಗುರುವು ಷಷ್ಠನಾಗಿ ಬಂದರೆ ಈ ಕೆಳಗಿನಂತೆ ಫಲ
ಗಳನ್ನು ಕೊಡುವನು—

ಶತ್ರುಕಾಟ, ಸ್ವಜನ-ಕಲಹ, ಕೌಟುಂಬಿಕ ವಿರಸ, ಶರೀರಬಾಧೆ,
ರೋಗ-ಉಲ್ಬಣ, ದ್ರವ್ಯಚಿಂತೆ, ಉದ್ಯೋಗ, ನೌಕರಿಯಲ್ಲಿ ಹಿನ್ನಡೆ
ಅಥವಾ ಪ್ರತಿಕೂಲ, ನಿರಂತರ ಚಿಂತೆ

(೭) ಗುರುವು ಗೋಚರಿಯಿಂದ ಸಪ್ತಮನಾಗಿ ಬಂದರೆ ಈ
ಕೆಳಗಿನಂತೆ ಫಲಗಳನ್ನು ಕೊಡುವನು—

ಆರೋಗ್ಯ ಸಮಾಧಾನಕರ, ವಾದಸ್ಪರ್ಧೆ, ಕೋರ್ಟ-ಕಚೇರಿ ಕೆಲಸ
ಗಳಲ್ಲಿ ಯಶಸ್ಸು, ದ್ರವ್ಯಲಾಭ, ವಾಹನಸೌಖ್ಯ, ಸ್ತ್ರೀಸೌಖ್ಯ,
ಕೌಟುಂಬಿಕ ಸೌಖ್ಯ, ಸಮಾಜದಲ್ಲಿ ಮಾನ ಸನ್ಮಾನ, ಉದ್ಯೋಗ
ದಲ್ಲಿ ಉತ್ಕರ್ಷ, ಪ್ರವಾಸ, ತಿರುಗಾಟ, ನೌಕರೀ ವರ್ಗದವರಿಗೆ ಬದಲಿ.

(೮) ಗುರುವು ಗೋಚರಿಯಿಂದ ೮ನೇಯವನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು —

ವಿದ್ಯೆಯಲ್ಲಿ ಹಾನಿ, ಬುದ್ಧಿಭ್ರಂಶ, ಕೌಟುಂಬಿಕ ಕಲಹ, ಸಂತತಿ-ಕ್ಲೇಶ, ರೋಗವೃದ್ಧಿ, ಶತ್ರುಪ್ರಬಲತೆ, ಶರೀರಪೀಡೆ, ಚಿಂತಾತುರತೆಸ್ಥ, ವ್ಯಾಕುಲತೆ, ಓಡಾಟ, ಕಾರ್ಯವಿಲಂಬ, ದ್ರವ್ಯಚಿಂತೆ, ಸ್ತ್ರೀಪೀಡೆ ಮುಂತಾದ ಪೀಡೆಗಳು ಉದ್ಭವಿಸುವವು.

(೯) ಗುರುವು ಗೋಚರಿಯಿಂದ ನವಮನಾಗಿ ಬಂದರೆ ಈ ಕೆಳಗಿನಂತೆ ಫಲಗಳು ಲಭಿಸುವವು—

ಉದ್ಯೋಗ-ಧಂಧೆಯಲ್ಲಿ ಉತ್ಕರ್ಷ, ದೂರದ ಪ್ರವಾಸ, ನೌಕರಿಯಲ್ಲಿ ಬದಲಿ, ತೀರ್ಥಯಾತ್ರಾ ಯೋಗ, ಪರದೇಶ-ಗಮನ, ದ್ರವ್ಯಲಾಭ, ಸ್ತ್ರೀಸೌಖ್ಯ, ಸಂತತಿ-ಸೌಖ್ಯ, ಕೌಟುಂಬಿಕ ಸೌಖ್ಯ, ಶರೀರಸುಖ, ಯಾವದೇ ಕೆಲಸದಲ್ಲಿಯೂ ಅನುಕೂಲತೆ, ಜೀವನದಲ್ಲಿಯ ಭಾಗ್ಯೋದಯ ಕಾಲದ ಆರಂಭ, ಕೈಕೊಂಡ ಕೆಲಸದಲ್ಲಿ ಪ್ರಗತಿ, ವಾದ-ಸ್ಪರ್ಧೆಯಲ್ಲಿ ಜಯ, ಮಾನ-ಸನ್ಮಾನ, ರಾಜಾನುಕೂಲತೆ, ಜನಾನುಕೂಲತೆ.

(೧೦) ಗುರುವು ಗೋಚರಿಯಿಂದ ದಶಮನಾಗಿ ಬಂದರೆ ಈ ಕೆಳಗಿನ ಫಲಗಳನ್ನು ಕೊಡುವನು—

ಪ್ರಾಮುಖ್ಯವಾಗಿ ಉದ್ಯೋಗ, ಧಂಧೆ, ನೌಕರಿಯಲ್ಲಿ ಪ್ರಗತಿ, ಆರ್ಥಿಕ ಲಾಭ, ಸ್ಥಾವರಜಂಗಮ ಸೌಖ್ಯ, ವಾಹನಸೌಖ್ಯ, ಜನಮಾನ್ಯತೆ, ಕೈಕೊಂಡ ಕೆಲಸದಲ್ಲಿ ಯಶಸ್ಸು

(೧೧) ಗುರುವು ಗೋಚರಿಯಿಂದ ೧೧ನೇಯವನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಆಕಸ್ಮಿಕ ಧನಲಾಭ, ಬಹುಮುಖ ಧನಲಾಭ, ವಿದ್ಯೆ ಹಾಗೂ ಶಿಕ್ಷಣದಲ್ಲಿ ಯಶಸ್ಸು ಹಾಗೂ ಪ್ರಗತಿ, ದ್ರವ್ಯಸಂಚಯ, ಸ್ತ್ರೀ-ಸೌಖ್ಯ, ಕೌಟುಂಬಿಕ ಸೌಖ್ಯ, ಸಂತತಿ-ಸೌಖ್ಯ, ಅಧಿಕಾರಪ್ರಾಪ್ತಿ,

ಮಾನ-ಸನ್ಮಾನ, ಶತ್ರುನಾಶ, ಸ್ವಜನ-ಸನ್ಮಾನ, ಬಂಧು-ಉತ್ಕರ್ಷ, ದೇವತಾನುಕೂಲತೆ, ಜನಾನುಕೂಲತೆ, ರಾಜಾನುಕೂಲತೆ, ಕೈಕೊಂಡ ಎಲ್ಲ ಕಾರ್ಯದಲ್ಲಿಯೂ ಯಶಸ್ಸು.

(೧೨) ಗುರುವು ಗೋಚರಿಯಿಂದ ೧೨ನೇಯವನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಕೌಟುಂಬಿಕ ವಿರಸ, ಸ್ತ್ರೀಸೌಖ್ಯಕ್ಕೆ ವಿಘ್ನ, ಏಕತ್ರ ಕುಟುಂಬಕ್ಕೆ ಹಾನಿ, ವ್ರಣ ಹಾಗೂ ಋಣ ಯೋಗ, ಶರೀರಪೀಡೆ, ರೋಗ-ವೃದ್ಧಿ, ಸಂತತಿಗೆ ಅನಿಷ್ಟ, ವೃಥಾಪವಾದ, ಜನಾಪವಾದ, ಪ್ರತಿನಿತ್ಯ ಕಲಹ, ಸ್ಥಲಾಂತರ, ದ್ರವ್ಯನಾಶ, ಶತ್ರುಪೀಡೆ ಮುಂತಾದವುಗಳು.

## ಶುಕ್ರನ ಗೋಚರಿಯು ವಿಸ್ತಾರ ಫಲಗಳು

(೧) ಶುಕ್ರನು ಗೋಚರಿಯಿಂದ ಜನ್ಮಸ್ಥನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಕಲಾಕೌಶಲ್ಯದಲ್ಲಿ ಪ್ರಗತಿ ಹಾಗೂ ಮೆಚ್ಚಿಗೆ, ಸ್ತ್ರೀಸೌಖ್ಯ, ಕೌಟುಂಬಿಕ ಸೌಖ್ಯದಲ್ಲಿ ಉತ್ತಮ, ಉದ್ಯೋಗದಲ್ಲಿ ಪ್ರಗತಿ, ಬೆಲೆಯುಳ್ಳ ವಸ್ತು-ವಡವೆಗಳ ಪ್ರಾಪ್ತಿ, ಇಲ್ಲವೆ ಖರೀದಿ, ವಾಹನ-ಸೌಖ್ಯ.

(೨) ಗೋಚರಿಯಿಂದ ಶುಕ್ರನು ಎರಡನೇಯವನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ವ್ಯಾಪಾರ-ಉದ್ಯೋಗಗಳಲ್ಲಿ ಯಶಸ್ಸು, ಅನೇಕ ಪದಾರ್ಥಗಳನ್ನು ಕೊಳ್ಳುವಿಕೆ, ಸ್ತ್ರೀಸೌಖ್ಯ, ಕೌಟುಂಬಿಕ ಸೌಖ್ಯ, ಪ್ರಾಪಂಚಿಕ ಸೌಖ್ಯ, ಪ್ರವಾಸ, ದ್ರವ್ಯಲಾಭ.

(೩) ಗೋಚರಿಯಿಂದ ಶುಕ್ರನು ತೃತೀಯನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಪರೋಪಕಾರದ ಕೆಲಸ, ಕೈಕೊಂಡ ಕೆಲಸದಲ್ಲಿ ಅರ್ಧ ಯಶ ಬಂಧುಬಳಗದವರಿಂದ ಸಹಾನುಭೂತಿ, ಸಹಾಯ, ಸಹಕಾರ, ಕೌಟುಂಬಿಕ ಸೌಖ್ಯ ಉತ್ತಮ.

(೪) ಶುಕ್ರನು ಗೋಚರಿಯಿಂದ ಚತುರ್ಥನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಹೊಲ–ಮನೆ, ಸ್ಥಾವರ ಇಸ್ಟೇಟಗಾಗಿ ವ್ಯಾಜ್ಯ. ರೋಗ, ದುರ್ಜನ–ಸಹವಾಸ, ಸ್ತ್ರೀಸುಖ, ಕೌಟುಂಬಿಕ ಸುಖ. ಅತಿಶಯ ಖರ್ಚು.

(೫) ಶುಕ್ರನು ಗೋಚರಿಯಿಂದ ಐನೇಯವನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಸಂತತಿ ಸೌಖ್ಯ, ದ್ರವ್ಯಸಂಚಯ. ವಿದ್ಯೆಯಲ್ಲಿ ಯಶ, ರೇಡಿಯೋ, ಟ್ರಾಂಜಿಸ್ಟರ್, ಸ್ಕೂಟರ್, ಕಾರ್, ಹೊಲಮನೆ ಮೊದಲಾದ ಬೆಲೆಯುಳ್ಳ ವಸ್ತುಗಳ ಪ್ರಾಪ್ತಿ, ಪ್ರತಿಷ್ಠೆ ಹಾಗೂ ಶ್ರೀಮಂತ ವರ್ಗದವರ ಸ್ನೇಹ.

(೬) ಶುಕ್ರನು ಗೋಚರಿಯಿಂದ ಆರನೆಯವನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಶತ್ರುಪ್ರಾಬಲ್ಯ, ಅತಿಶಯ ಖರ್ಚು, ವ್ರಣಯೋಗ, ರೋಗಬಾಧೆ, ರೋಗವೃದ್ಧಿ, ಸ್ತ್ರೀ–ಚಿಂತೆ, ಪರಸ್ತ್ರೀ ಸಂಬಂಧ ಕೌಟುಂಬಿಕ ವಿರಸ, ಕಳವು, ತುಡುಗು ಮುಂತಾದ ಸಂಗತಿಗಳು ಜರುಗುತ್ತವೆ.

(೭) ಶುಕ್ರನು ಗೋಚರಿಯಿಂದ ೭ನೇಯವನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಸುಂದರ ವಸ್ತುಗಳ ಪ್ರಾಪ್ತಿ, ಹೊಸ ವಸ್ತುಗಳ ಖರೀದಿ, ವ್ಯಾಪಾರ–ಉದ್ಯೋಗಳಲ್ಲಿ ಲಾಭ, ಕೌಟುಂಬಿಕ ಸೌಖ್ಯ, ಸ್ತ್ರೀಸೌಖ್ಯ, ಆರೋಗ್ಯ ಉತ್ತಮ, ಅಲ್ಪ ಪ್ರವಾಸ, ಜನಾನುಕೂಲತೆ, ದ್ರವ್ಯ–ಲಾಭ.

(೮) ಶುಕ್ರನು ಗೋಚರಿಯಿಂದ ೮ನೇಯವನಾಗಿ ಬಂದರೆ—

ಸಂಕಟಕಾಲ, ಗುಪ್ತ ಶತ್ರುಗಳಿಂದ ಹಾನಿ, ಸ್ತ್ರೀ – ಶತ್ರುಗಳ

ಉಪಟಳ, ರೋಗವೃದ್ಧಿ, ಅಸಮಾಧಾನ ಶಾರೀರಿಕ ಪೀಡೆ, ಸಮಾಜದಿಂದ ನಿಂದೆ, ಕೌಟುಂಬಿಕ ವಿರಸ, ಸ್ತ್ರೀಸೌಖ್ಯಕ್ಕೆ ವಿಘ್ನ, ಅಪಮಾನ, ಪಾಪಕರ್ಮ, ವ್ಯಥಾ ಖರ್ಚು ಮುಂತಾದವುಗಳು ಜರುಗುತ್ತವೆ.

(೯) ಶುಕ್ರನು ಗೋಚರಿಯಿಂದ ೯ನೇಯವನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ಪುಣ್ಯಕ್ಷೇತ್ರ ದರ್ಶನ, ಮಂಗಲ ಹಾಗೂ ಧಾರ್ಮಿಕ ಕಾರ್ಯ, ವಿವಾಹ ಹಾಗೂ ವೈವಾಹಿಕ ಜೀವನಸೌಖ್ಯ, ಭಾಗ್ಯೋದಯ, ವಾಹನಸೌಖ್ಯ, ದ್ರವ್ಯಲಾಭ, ಬೆಲೆಯುಳ್ಳ ವಸ್ತುಗಳ ಪ್ರಾಪ್ತಿ, ಕೌಟುಂಬಿಕ ಸೌಖ.

(೧೦) ಶುಕ್ರನು ಗೋಚರಿಯಿಂದ ದಶಮನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುವನು—

ವ್ಯಾಪಾರ, ಉದ್ಯೋಗ, ನೌಕರಿಯಲ್ಲಿ ಲಾಭ, ಯಶ, ಪ್ರಗತಿ, ದ್ರವ್ಯಸಂಗ್ರಹ, ಸತ್ಕರ್ಮ, ವಾಹನಪ್ರಾಪ್ತಿ, ಸ್ತ್ರೀಯರಿಂದ ಲಾಭ.

(೧೧) ಶುಕ್ರನು ಗೋಚರಿಯಿಂದ ೧೧ನೇಯವನಾಗಿ ಬಂದರೆ ಈ ಕೆಳಗಿನಂತೆ ಫಲಗಳನ್ನು ಕೊಡುತ್ತಾನೆ—

ಆಕಸ್ಮಿಕ ಧನಲಾಭ, ಬಹುಮುಖ ಧನಲಾಭ, ವಿವಾಹಯೋಗ, ವೈವಾಹಿಕ ಜೀವನದಲ್ಲಿ ಸೌಖ್ಯ, ಮಾನ–ಸನ್ಮಾನ, ವಾಹನಸೌಖ್ಯ, ಬೆಲೆಯುಳ್ಳ ವಸ್ತುಗಳ ಪ್ರಾಪ್ತಿ, ಕಲಾ–ಕೌಶಲ್ಯದಲ್ಲಿ ಪ್ರಾಪ್ತಿ, ಸಂತತಿ–ಸೌಖ್ಯ, ವಿದ್ಯೆಯಲ್ಲಿ ಯಶ, ವ್ಯಾಪಾರ–ಉದ್ಯೋಗಳಲ್ಲಿ ಅನುಕೂಲತೆ, ವಾದ–ಸ್ಪರ್ಧೆಯಲ್ಲಿ ಜಯ.

(೧೨) ಶುಕ್ರನು ಗೋಚರಿಯಿಂದ ೧೨ನೇಯವನಾಗಿ ಬಂದರೆ ಕೆಳಗಿನ ಫಲಗಳನ್ನು ಕೊಡುವನು—

ಅತಿಶಯ ಖರ್ಚು, ಪ್ರವಾಸ, ಬಂಧು-ಬಳಗದ ಭೆಟ್ಟಿ, ಸ್ತ್ರೀಸೌಖ್ಯ ಉತ್ತಮ ಆದರೆ ಕೌಟುಂಬಿಕ ವಿರಸ, ವಾಹನಸೌಖ್ಯ, ನೇತ್ರ–ಪೀಡೆ, ರೋಗವೃದ್ಧಿ, ಮುಂತಾದವುಗಳು.

# ಶನಿಯು ಗೋಚರಿಯ ವಿಸ್ತಾರ ಫಲಗಳು

ಶನಿಯ ಗೋಚರಿಯ ಫಲದ ವಿಷಯವಾಗಿ ನಮ್ಮ " ಸಾಡೇಸಾತಿ " ಗ್ರಂಥದಲ್ಲಿ ವಿವರವಾಗಿ ವಿವೇಚಿಸಲಾಗಿದ್ದರಿಂದ ಇಲ್ಲಿ ಸಂಕ್ಷಿಪ್ತವಾಗಿ ಕೊಡಲಾಗುವದು.

(೧) ಶನಿಯು ಜನ್ಮಸ್ಥನಿದ್ದರೆ ಸಾಡೇಸಾತಿ ಎನ್ನುವರು.
ಜನ್ಮಸ್ಥ ಶನಿಯು ವಿಶೇಷವಾಗಿ ಶಾರೀರಿಕ ಪೀಡೆಯನ್ನೇ ಹೆಚ್ಚಾಗಿ ಕೊಡುವನು. ಅಪಘಾತ, ಉದ್ಯೋಗದಲ್ಲಿ ಹಾನಿ, ಚಿಂತಾತುರತೆ ವಾತದೋಷ, ಮಂದ ಬುದ್ಧಿ, ಆಲಸ್ಯ, ಮುಂತಾದವುಗಳು.

(೨) ಶನಿಯ ದ್ವಿತೀಯನಿದ್ದರೆ ಸಾಡೇಸಾತಿ ಇರಂತ್ತದೆ.
ಈ ಸಾಡೇಸಾತಿ ಹೆಚ್ಚಾಗಿ ಆರ್ಥಿಕ ಹಾನಿ, ವ್ರಣಬಾಧೆ, ಕೊಡ–ಕೊಳ್ಳುವಿಕೆಯಲ್ಲಿ ಅಪಮಾನ, ವ್ಯಾಜ್ಯ, ಕಳವು, ತುಡುಗು ಮೊದಲಾದ ಆರ್ಥಿಕ ವಿಷಯಕ್ಕೆ ಹೆಚ್ಚು ಹಾನಿದಾಯಕವಿರುವ ಪ್ರಸಂಗಗಳು ಜರುಗುತ್ತವೆ.

(೩) ಗೋಚರಿಯಿಂದ ೩ನೇಯ ಶನಿ ಬಂದರೆ—
ಉದ್ಯೋಗ–ನೌಕರಿಯಲ್ಲಿ ಪ್ರಗತಿ, ದ್ರವ್ಯಲಾಭ, ವಾದ–ಸ್ಪರ್ಧೆಯಲ್ಲಿ ಯಶಸ್ಸು, ದೂರದ ಪ್ರವಾಸ ಮೊದಲಾದವುಗಳು.

(೪–೫) ಚತುರ್ಥ ಹಾಗೂ ಪಂಚಮ ಗೋಚರೀ ಶನಿಗೆ " ಪಂಚಮ ಶನಿ " ಎಂತಲೂ ಅನ್ನುವರು.
ಅದರಲ್ಲಿಯೂ ವಿಶೇಷವಾಗಿ ಕೌಟುಂಬಿಕ ಸೌಖ್ಯಕ್ಕೆ ವಿಘ್ನ, ಸ್ವಜನ ವಿರೋಧ, ವೈವಾಹಿಕ ಜೀವನಕ್ಕೆ ತೊಂದರೆ, ಪಿತ್ರಾರ್ಜಿತ ಸೌಖ್ಯದಲ್ಲಿ ಹಾನಿ, ಶತ್ರುಪೀಡೆ, ಕೋರ್ಟ್–ಕಚೇರೀ ಕೆಲಸದಲ್ಲಿ ಹಾನಿ, ಚೋರಭೀತಿ, ಮಿತ್ರರೂ ಶತ್ರುಗಳಾಗುವಿಕೆ, ಬೇರೆಯವರಿಗೆ ಜಾಮೀನು ಮುಂತಾದ ಉಪಕಾರ ಮಾಡುವದರಿಂದ ಹಾನಿ; ಇದರಲ್ಲಿ ಪಂಚಮ ಶನಿಯು ಕೌಟುಂಬಿಕ ಸೌಖ್ಯಕ್ಕೆ ವಿಘ್ನವನ್ನೂ ಚತುರ್ಥ ಶನಿಯು ಆರ್ಥಿಕ ಹಾಗೂ ಶತ್ರುಪೀಡೆಯನ್ನೂ ಕೊಡುವನು.

(೬) ಗೋಚರಿಯಿಂದ ಶನಿಯು ಆರನೇಯವನಾಗಿ ಬಂದರೆ—
ಉದ್ಯೋಗ ವ್ಯವಹಾರದಲ್ಲಿ ಪ್ರಗತಿ, ಯಶ, ದ್ರವ್ಯಲಾಭ, ಗೌರವ, ಆಕಸ್ಮಿಕ ಲಾಭ, ವಾದ-ಸ್ಪರ್ಧೆ, ಕೋರ್ಟ ಕಚೇರಿ ಕೆಲಸಗಳಲ್ಲಿ ಪ್ರಚಂಡ ಯಶ, ಮಾನ-ಸನ್ಮಾನವನ್ನು ಕೊಡುವನು. ಇದರಲ್ಲಿಯೂ ಮೂರನೇಯ ಶನಿಯು ದ್ರವ್ಯಲಾಭವನ್ನೂ, ೬ನೇಯ ಶನಿಯು ಉದ್ಯೋಗದಲ್ಲಿ ಪ್ರಗತಿಯನ್ನೂ ಕೊಡುವನು. ೩ನೇಯ ಶನಿಯು ಮಾನ-ಸನ್ಮಾನವನ್ನೂ ಆರನೇಯ ಶನಿಯು ವಾದ-ಸ್ಪರ್ಧೆ, ಕೋರ್ಟ್ ಕಚೇರಿ ಕೆಲಸಗಳಲ್ಲಿ ಯಶಸ್ಸನ್ನೂ ಕೊಡುವನು.

(೭) ಶನಿಯು ಗೋಚರಿಯಿಂದ ೭ನೇಯವನಾಗಿ ಬಂದಾಗ—
ಶಾರೀರಿಕ ವಿಷಯದಲ್ಲಿ ಕಷ್ಟಕಾರಕನೂ, ಆರ್ಥಿಕ ದೃಷ್ಟಿಯಿಂದ ಪ್ರಗತಿದಾಯಕನೂ, ಇದ್ದ ಉದ್ಯೋಗ ನೌಕರಿಯಲ್ಲಿ ಸಮಾಧಾನತ್ವವನ್ನೂ, ಕೌಟುಂಬಿಕ ವಿಷಯದಲ್ಲಿ ಅನುಕೂಲತೆಯನ್ನೂ ಕೊಡುವನು.

(೮) ಶನಿಯು ಗೋಚರಿಯಿಂದ ಅಷ್ಟಮನಾಗಿ ಬಂದರೆ—
ಎಲ್ಲ ಸಂಗತಿಗಳಲ್ಲಿ ಕ್ರಾಂತಿಕಾರಕನೂ, ಶಾರೀರಿಕ ದೃಷ್ಟಿಯಲ್ಲಿ ಹಾನಿಕಾರಕನೂ ಕಳವು, ತುಡುಗು, ಅಗ್ನಿಭಯ, ಆರೋಪ, ಜೇಲುವಾಸ, ದಂಡ, ಅಸಂತೋಷ, ಅಪಘಾತ ಮುಂತಾದ ಅಸಮಾಧಾನಕಾರಕ ಸಂಗತಿಗಳು ಜರುಗುವದಲ್ಲದೇ, ಕೌಟುಂಬಿಕ ವಿರಸ, ವೈವಾಹಿಕ ಜೀವನಕ್ಕೆ ತೊಂದರೆ, ದ್ರವ್ಯಹಾನಿ, ಉದ್ಯೋಗದಲ್ಲಿ ಹಿನ್ನಡೆ, ನೌಕರಿಯಲ್ಲಿ ಹಾನಿ, ವಿದ್ಯೆಯಲ್ಲಿ ಆತಂಕ, ಆರ್ಥಿಕದಲ್ಲಿ ಆಕಸ್ಮಿಕ ಏರಿಳಿತ ಕೊಡುತ್ತಾನೆ.

(೯) ಶನಿಯು ಗೋಚರಿಯಿಂದ ೯ನೇಯವನಾಗಿ ಬಂದಾಗ—
ಅಷ್ಟಮ ಶನಿಯಿಂದ ಉಂಟಾದ ತೊಂದರೆಯನ್ನು ಕಡಿಮೆ ಮಾಡಿ, ಎಲ್ಲ ದೃಷ್ಟಿಯಿಂದಲೂ ಅನುಕೂಲತೆ ಹಾಗೂ ಪ್ರಗತಿ ತೋರಿಸುವನು. ಪ್ರವಾಸ ಹಾಗೂ ಕಾರ್ಯಸಿದ್ಧಿಯನ್ನುಂಟು ಮಾಡುವನು.

೧೦) ಶನಿಯು ಗೋಚರಿಯಿಂದ ೧೦ ನೆಯವನಾಗಿ ಬಂದಾಗ— ಆಕಸ್ಮಿಕ ಲಾಭ, ಉದ್ಯೋಗದಲ್ಲಿ ಯಶಸ್ಸು, ಅನುಕೂಲತೆ, ಅಧಿಕಾರ ಪ್ರಾಪ್ತಿ, ಮಾನ-ಸನ್ಮಾನ, ಜೀವನದ ಎಲ್ಲ ರಂಗದಲ್ಲಿಯೂ ಯಶಸ್ಸನ್ನುಂಟು ಮಾಡುವನು.

೧೧) ಶನಿಯು ಗೋಚರಿಯಿಂದ ೧೧ ನೆಯವನಾಗಿ ಬಂದಾಗ— ಉದ್ಯೋಗಕ್ಕಿಂತಲೂ, ಆರ್ಥಿಕ ದೃಷ್ಟಿಯಿಂದ ಅನುಕೂಲತೆಯನ್ನುಂಟು ಮಾಡು ಮಾಡುವನು. ಬಹುಮುಖಿ ಧನಾರ್ಜನೆ, ಆಕಸ್ಮಿಕ ಧನಯೋಗ, ಮಾನ ಸನ್ಮಾನ, ಸ್ಥಾವರ ಇಸ್ಟೇಟ್ ಸೌಖ್ಯ, ಬೆಲೆಯಳ್ಳ ವಸ್ತುಗಳ ಪ್ರಾಪ್ತಿ ಇಲ್ಲವೆ ಖರೀದಿ, ಅಧಿಕಾರಯೋಗ, ಕೈಕೊಂಡ ಕೆಲಸದಲ್ಲಿ ಯಶಸ್ಸು, ಜೀವನದ ಎಲ್ಲ ರಂಗದಲ್ಲಿಯೂ ಸುಖವನ್ನುಂಟು ಮಾಡುವನು.

೧೨) ಗೋಚರಿಯಿಂದ ಶನಿಯು ೧೨ ನೆಯವನಾಗಿ ಬಂದಾಗ— ದ್ರವ್ಯಹಾನಿ, ಶಾರೀರಿಕ ಪೀಡೆ, ಅಪಮಾನ, ಮಾನಸಿಕ ಚಿಂತೆ, ಅಪಘಾತ, ಚೋರಭಯ ಅಗ್ನಿಭಯ, ಶಿಕ್ಷೆ, ದಂಡ, ನೌಕರಿಯಲ್ಲಿ ಹಿಂಬಡತಿ ಮುಂತಾದವು ಜರುಗುತ್ತವೆ.

ವಿ. ಸೂ:- ಶನಿಯ ಗೋಚರಿ ಫಲದ ವಿಷಯವಾಗಿ ನಮ್ಮ "ಸಾಡೇ-ಸಾತಿ" ಗ್ರಂಥದಲ್ಲಿ ವಿವರವಾಗಿ ವಿವೇಚಿಸಿದೆ.



# ೨

# ನಿಯತ ಕಾಲಿಕ ರಾಶಿ ಭವಿಷ್ಯವನ್ನು ಹೇಗೆ ಬರೆಯಬೇಕು ?

ನಿಯತ ಕಾಲಿಕ ರಾಶಿ ಭವಿಷ್ಯಗಳನ್ನು ಹೇಗೆ ಬರೆಯಬೇಕು ? ಫಲ ನಿರ್ಣಯ ಹೇಗೆ ? ಸೂಕ್ಷ್ಮಾ ಸೂಕ್ಷ್ಮ ಫಲಗಳೆಂದರೇನು ? ಒಂದೇ ರಾಶಿಯ ಭಿನ್ನ ಭಿನ್ನ ವರ್ಗದ ಜನರ ಫಲಗಳಲ್ಲಿಯ ವ್ಯತ್ಯಾಸ, ಯಾವದೊಂದು ಗೋಚರೀ ಗ್ರಹದ ಫಲಗಳಲ್ಲಿಯ ಅರ್ಥ ವಿವರಿಸುವದರಲ್ಲಿ ಭಿನ್ನ ಭಿನ್ನ ವಿಷಯಗಳಲ್ಲಿಯ ಬದಲಾವಣೆ— ಈ ಮೊದಲಾದ ಸಂಗತಿಗಳನ್ನು ಹೇಗೆ ಪರಿಶೀಲಿಸಬೇಕು ಎಂಬುದನ್ನು ಉದಾಹರಣ ಸಹಿತವಾಗಿ ಈ ಪ್ರಕರಣದಲ್ಲಿ ವಿವರಿಸಲಾಗಿದೆ.

ಸಾಮಾನ್ಯವಾಗಿ ರಾಶಿ ಭವಿಷ್ಯಗಳಲ್ಲಿ ನಿತ್ಯ, ಸಾಪ್ತಾಹಿಕ, ಪಾಕ್ಷಿಕ, ಮಾಸಿಕ, ಷಾಣ್ಮಾಸಿಕ, ವಾರ್ಷಿಕಗಳೆಂದು ೬ ಪ್ರಕಾರಗಳಿವೆ. ಈ ಆರೂ ಪ್ರಕಾರಗಳನ್ನು ಬರೆಯುವದರಲ್ಲಿ ಅನೇಕ ರೀತಿಗಳಿವೆ. ಈಗ ಚಲಾವಣೆಯಲ್ಲಿರುವ ರೀತಿಗಳನ್ನು ಮಾತ್ರ ಇಲ್ಲಿ ವಿವರಿಸಲಾಗುವದು. ಯಾವದೇ ಅವಧಿಯ ನಿಯತ ಕಾಲಿಕ ಭವಿಷ್ಯವನ್ನು ಬರೆಯುವ ಪೂರ್ವದಲ್ಲಿ, ಆ ಅವಧಿಯ ಗೋಚರೀ ಗ್ರಹಗಳ ಸ್ಥಿತಿಯನ್ನು ನೋಡಬೇಕು.

ಗ್ರಹಸ್ಥಿತಿ :—

ಆಯಾ ರಾಶಿಯವರಿಗೆ ಆಯಾ ಅವಧಿಯ ಗೋಚರೀ ಗ್ರಹಗಳು ಎಷ್ಟನೆಯವರಿರುವರು ? ಎಷ್ಟನೆಯವರಿರುವದರಿಂದ ಶುಭರು, ಎಷ್ಟನೆಯವರಿರುವದರಿಂದ ಅಶುಭರು ? ಈ ಮೊದಲಾಗಿ ಗ್ರಹಮಾನ, ಗ್ರಹಸ್ಥಿತಿ, ಗ್ರಹಗತಿಗಳನ್ನು ಸಕಾರಣವಾಗಿ ತಿಳಿಸಿದರೆ ಓದುಗರಿಗೆ ಆಸಕ್ತಿಯನ್ನು ಕೆರಳಿಸುವದಲ್ಲದೇ, ಆಯಾ ಕಾಲಮಾನಗಳು ಅನುಕೂಲವೇಕೆ ? ಪ್ರತಿಕೂಲವೇಕೆ ? ಎಂಬುದರ ಕಲ್ಪನೆ ಬಂದು ಶಾಸ್ತ್ರದಲ್ಲಿಯ ವಿಶ್ವಾಸ, ನಂಬಿಕೆ, ಆದರ,

ಆಸಕ್ತಿ ಬೆಳೆಯುವದರಲ್ಲಿ ಸಹಾಯವಾದಂತಾಗುವದು. ಕೇವಲ ಮಂಗಳ ಅಶುಭ, ಗುರು ಶುಭ ಎಂದೆನ್ನದೇ, ಮಂಗಳನು ಗೋಚರಿಯಿಂದ ಅಷ್ಟಮನಾಗಿ ಬಂದಿರುವದರಿಂದ, ಅಥವಾ ಶನಿಯೊಂದಿಗೆ ಪ್ರತಿಯೋಗ ಮಾಡುವದರಿಂದ ಅಥವಾ ಅಸ್ತ, ವಕ್ರಿ, ಇರುವದರಿಂದ ಈ ಆಯಾ ರಾಶಿಯವರಿಗೆ ಅಶುಭನ. ಇದರಂತೆಯೇ ಗುರುವು ಗೋಚರಿಯಿಂದ ದ್ವಿತೀಯ, ಪಂಚಮ ಮೊದಲಾಗಿ ಆಗುವದರಿಂದ ಶುಭನು– ಇಂತೆಂದು ಹೇಳುವದರಿಂದ ಓದುಗರಿಗೆ ಜ್ಯೋತಿಷ್ಯದಲ್ಲಿ ಅಭಿರುಚಿ ಹಾಗೂ ಸಂಶೋಧನೆಗಾಗಿ ವಿಶ್ವಾಸ ಕುದುರಿಸಲು ಪೋಷಕವಾಗುವದು.

### ಫಲಗಳನ್ನು ಹೇಗೆ ಬರೆಯಬೇಕು ?

ಯಾವ ಯಾವ ಗ್ರಹಗಳು ಗೋಚರಿಯಿಂದ ಎಷ್ಟನೆಯವರಾದಾಗ ಯಾವ ಯಾವ ಫಲಗಳನ್ನು ಕೊಡುವರು ? ಎಂಬುದನ್ನು ಹಿಂದಿನ ಪ್ರಕರಣದಲ್ಲಿ ಕೊಡಲಾಗಿದೆ. ಆದರೆ ಆ ಫಲಗಳನ್ನು ಬರೆಯುವಾಗ ಅಂಶಾತ್ಮಕವಾಗಿಯೂ ವರ್ಗಾನುಸರವಾಗಿಯೂ, ವಿಷಯಾನುಸಾರವಾಗಿಯೂ ಬರೆಯುವದರಿಂದ ಹೆಚ್ಚು ಸೂಕ್ಷ್ಮ ಸಂಗತಿಗಳು ತಿಳಿಯುವವು.

### ವರ್ಗಾನುಸಾರ ಫಲಾದೇಶ

ಯಾವದೊಂದು ಅವಧಿಯಲ್ಲಿ ಗ್ರಹವು ಗೋಚರಿಯಿಂದ ಶುಭಾ–ಶುಭವಿದ್ದರೂ, ಯಾವದೊಂದು ರಾಶಿಯ ಎಲ್ಲಿ ವರ್ಗದವರಿಗೂ ಒಂದೇ ಪರಿಣಾಮವನ್ನುಂಟು ಮಾಡಲಾರದು. ಯಾವದೊಂದು ರಾಶಿಯ ಜನರಲ್ಲಿ ಶೇತಕೀವರ್ಗ, ವ್ಯಾಪಾರೀ ವರ್ಗ, ವಿದ್ಯಾರ್ಥಿವರ್ಗ, ನೌಕರಿ ವರ್ಗ, ಸ್ವತಂತ್ರ ಉದ್ಯೋಗಸ್ಥರ ವರ್ಗ, ರಾಜಕಾರಣಿ, ಕಲಾಕಾರ, ಮಹಿಳಾ ವರ್ಗ, ಈ ಮೊದಲಾದ ಎಲ್ಲ ವರ್ಗಗಳ ಜನರಿಗೂ ಒಂದೇ ತರಹದ ಪರಿಣಾಮವುಂಟಾಗುವದೆಂದು ಹೇಳಲು ಬಾರದು. ಉದಾ— ಕರ್ಕ ರಾಶಿಯವರನ್ನೇ ತೆಗೆದು ಕೊಳ್ಳಿರಿ. ಈ ರಾಶಿಯವರಿಗೆ ಎಪ್ರಿಲ್

ತಿಂಗಳಲ್ಲಿ ಗೋಚರೀ ಗ್ರಹಗಳಲ್ಲಿ ಗುರು ೧೧ ನೆಯವನೂ, ಶನಿಯು ಅಷ್ಟಮನೂ ಇರುವನು. ಗುರು ೧೧ ನೆಯವನಾಗುವದರಿಂದ ಶುಭನು, ಶನಿಯು ಅಷ್ಟಮನಾಗಿರುವರಿಂದ ಅಶುಭನು. ಆದರೆ ಇಲ್ಲಿ ಕರ್ಕ ರಾಶಿಯ ಎಲ್ಲ ವರ್ಗದವರಿಗೂ ಶನಿಯು ಅಷ್ಟೇ ಪ್ರಮಾಣದಲ್ಲಿ ಅಶುಭ ನಾಗದೇ, ಕೃಷಿ ವರ್ಗದವರಿಗೂ ವಕೀಲ ವರ್ಗದವರಿಗೂ, ಕಬ್ಬಿಣ ಸಂಬಂಧದ (ಕಾರಖಾನೆ ಇತ್ಯಾದಿ) ವರ್ಗದವರಿಗೂ ಈ ಮುಂತಾದವರಿಗೆ ಮಾತ್ರ ಹೆಚ್ಚು ಅಶುಭನಾಗುವನು. ಇದರಂತೆಯೇ ಕರ್ಕ ರಾಶಿಯವರಿಗೆ ಗುರುವು ೧೧ ನೆಯವನಿರುವದರಿಂದ ಶುಭನಿದ್ದರೂ ಕೂಡ ಕರ್ಕ ರಾಶಿಯ ಶಿಕ್ಷಕ ವರ್ಗದವರಿಗೂ ವಿದ್ಯಾರ್ಥಿ ವರ್ಗದವರಿಗೂ ಹೆಚ್ಚು ಶುಭವನ್ನು ಉಂಟುಮಾಡುವನು. ಆದುದರಿಂದ ಯಾವದೊಂದು ರಾಶಿಯ ಎಲ್ಲ ವರ್ಗದ ಜನರಿಗೂ ಗ್ರಹಮಾನಗಳ ಶುಭಾಶುಭ ಪರಿಣಾಮವನ್ನು ವಿಸ್ತಾರ ವಾಗಿ ಬರೆಯಬೇಕು.

**ವಿಷಯಾನುಸಾರ ಫಲಾದೇಶ — (Results according to the Aspects)**

ಯಾವದೊಂದು ನಿಯತ ಕಾಲಿಕದಲ್ಲಿ ಯಾವದೊಂದು ಗ್ರಹ ಇಲ್ಲವೇ ಅನೇಕ ಗ್ರಹಗಳ ಗೋಚರಿಯ ಗ್ರಹಮಾನವು, ಯಾವದೊಂದು ರಾಶಿಯ ಜನರಿಗೆ ಜೀವನದ ಎಲ್ಲ ಘಟನೆಗಳ ವಿಷಯವಾಗಿ ಪೂರ್ಣ ಫಲ ದೊರೆಯಲಾರದು.

ಆರೋಗ್ಯ, ಸಾಂಪತ್ತಿಕ, ಶೈಕ್ಷಣಿಕ, ಔದ್ಯೋಗಿಕ, ನೌಕರಿ, ರಾಜಕಾರಣ, ವಿವಾಹ, ವೈವಾಹಿಕ ಜೀವನ ಈ ಮೊದಲಾದ ವಿಷಯ ಗಳಲ್ಲಿಯೂ, ಒಂದೇ ತರಹದ ಪರಿಣಾಮವು ಉಂಟಾಗುವದೆಂದು ಹೇಳಲ್ಕ ಬಾರದು. ಉದಾಹರಣೆಗಾಗಿ ಕರ್ಕರಾಶಿಯವರನ್ನೇ ತೆಗೆದುಕೊಳ್ಳಿರಿ— ಈ ಕರ್ಕರಾಶಿಯವರಿಗೆ ಮೇ ತಿಂಗಳ ಗೋಚರೀ ಗ್ರಹಗಳಲ್ಲಿ ಶನಿ–ಮಂಗಳರು ಅಶುಭರೂ, ಗುರು-ಶುಕ್ರರು ಶುಭರು ಇದ್ದಾರೆ. ಇಲ್ಲಿ ಆ ಅವಧಿಯ ಕರ್ಕರಾಶಿಯ ಅವಿವಾಹಿತ ಸ್ತ್ರೀ-ಪುರುಷರಿಗೆ ವಿವಾಹ ಯೋಗಕ್ಕೆ ಗುರು-ಶುಕ್ರರು ಶುಭ ಫಲಗಳನ್ನು ಕೊಡುತ್ತಾರೆ. ಆದರೆ ಶನಿ–ಮಂಗಳರ ಅಶುಭ ಫಲಗಳು ಹೆಚ್ಚಾಗಿ ವಿವಾಹಿತರಿಗೆ ದೊರಕುತ್ತವೆ.

ಆದ್ದರಿಂದ ಯಾವದೊಂದು ರಾಶಿಯು, ಯಾವದೊಂದು ಗ್ರಹದ ಶುಭಾಶುಭ ಫಲಗಳನ್ನು ಬರೆಯುವಾಗ, ಭಿನ್ನ ಭಿನ್ನ ದೃಷ್ಟಿಯಿಂದ ಭಿನ್ನ ಭಿನ್ನ ವರ್ಗದವರಿಗೆ ಅನ್ವಯಿಸುವಂತೆ ಬರೆಯಬೇಕು.

ಗ್ರಹಗಳಲ್ಲಿಯು, ಫಲಗಳಲ್ಲಿಯು ತಾರತಮ್ಯ —

ಯಾವದೊಂದು ಗ್ರಹವು ಇಲ್ಲವೇ ಯಾವದೇ ಗ್ರಹಗಳು ಯಾವದೊಂದು ನಿಯತಕಾಲಿಕ ಅವಧಿಯಲ್ಲಿ ಅನೇಕ ಪ್ರಕಾರದ ಅಥವಾ ಭಿನ್ನ ಭಿನ್ನ ಫಲಗಳನ್ನು ಕೊಡುತ್ತವೆ. ಅವನ್ನೂ ಕೂಡ ವಿರಳ ವಿರಳವಾಗಿ ಬರೆಯಬೇಕು. ರವಿಯು ಗೋಚರಿಯಿಂದ ೧ನೇಯ.ವನಾಗಿ ( ಜನ್ಮಸ್ಥನಾಗಿ ) ಬಂದರೆ ಶಾರೀರಿಕ ಅಸ್ವಸ್ಥತೆಯನ್ನೂ, ಪ್ರವಾಸವನ್ನೂ ಚಿತ್ತಚಂಚಲತೆಯನ್ನೂ, ಓಡಾಟವನ್ನೂ, ಪರಾಕ್ರಮ – ಕೆಲಸಗಳ ಪ್ರಾರಂಭವನ್ನೂ, ನೌಕರಿ ವರ್ಗದವರಿಗೆ ಬದಲಿಯನ್ನೂ ಕೊಡುವನು. ಇಲ್ಲಿ ನಾವು ಜನ್ಮಸ್ಥ ರವಿ ಬಂದ ಯಾವದೊಂದು ರಾಶಿಯವರಿಗೆ ಯಾವದೊಂದು ವಿಷಯದ ಬಗೆಗೆ ವಿವರಿಸದೆ. ಜನ್ಮಸ್ಥ ರವಿಯ ಗೋಚರಿಯ ಎಲ್ಲ ಫಲಗಳನ್ನೂ ಬರೆಯಬೇಕು. ಉದಾಹರಣೆಗೆ ವೃಷಭರಾಶಿಯವರಿಗೆ ಮೇ ತಿಂಗಳಲ್ಲಿ ಜನ್ಮಸ್ಥ ರವಿಯು ಇರುವನು. ಈ ಜನ್ಮಸ್ಥ ರವಿಯು ವೃಷಭರಾಶಿಯ ಎಲ್ಲ ವರ್ಗದವರಿಗೂ ಅಸ್ವಸ್ಥತೆಯನ್ನು (Unhealthy) ಕೊಡುತ್ತಿದ್ದರೂ ವೃಷಭರಾಶಿಯ ನೌಕರಿ ವರ್ಗದವರಿಗೆ ಬದಲೀ ಯೋಗ ಇಲ್ಲವೇ ಓಡಾಡುವ (Outdoor excutive work) ಕೆಲಸವನ್ನೂ ಕೊಡುವನು.

ಇದರಂತೆಯೇ ಯಾವದೊಂದು ರಾಶಿಯ ನಿಯತ ಕಾಲಿಕ ರಾಶಿ–ಭವಿಷ್ಯವನ್ನು ಬರೆಯುವಾಗ ಗೋಚರೀ ಎಲ್ಲ ಗ್ರಹಗಳ ಎಲ್ಲ ಫಲಗಳನ್ನೂ ಎಲ್ಲ ರೀತಿಯಿಂದ ಫಲಾದೇಶವನ್ನು ಮಾಡಬೇಕು.

ಅಂಶಾತ್ಮಕ ಫಲಾದೇಶ—

ಯಾವುದೊಂದು ಅವಧಿಯಲ್ಲಿ ಯಾವದೊಂದು ಗ್ರಹವು ಯಾವದೊಂದು ರಾಶಿ ವರ್ಗದವರಿಗೆ ಶುಭಾ–ಶುಭ ವಿದ್ದರೂ. ಆಯಾ ರಾಶಿಯ

ಎಲ್ಲ ನಕ್ಷತ್ರದವರಿಗೂ ಏಕಕಾಲಕ್ಕೆ ಶುಭಾ-ಶುಭ ಫಲಗಳನ್ನು ಕೊಡುತ್ತ
ವೆಂದು ಹೇಳಲಿಕ್ಕೆ ಬಾರದು. ಅದ್ದರಿಂದ ಯಾವದೊಂದು ಗೋಚರೀ
ಗ್ರಹದ ಫಲವನ್ನು ನೋಡುವಾಗ ಈ ವಿಷಯಕ್ಕೆ ಹೆಚ್ಚಿನ ಮಹತ್ವ
ಕೊಟ್ಟು ನಕ್ಷತ್ರಾನುಸಾರವಾಗಲೀ, ಚರಣಾನುಸಾರವಾಗಲೀ ಬರೆಯು
ವದರಿಂದ, ಹೆಚ್ಚಿನ ಹಾಗೂ ಸೂಕ್ಷ್ಮ ಫಲಗಳು ತಿಳಿಯುವವು.

ಈ ವಿಷಯವನ್ನು ಸಾಪ್ತಾಹಿಕ ಭವಿಷ್ಯವನ್ನು ಬರೆಯುವವರು
ಹೆಚ್ಚು ಗಮನಿಸಬೇಕು. ಗ್ರಹಗಳು ಅಂಶದಿಂದ (degree) ಸೂಕ್ಷ್ಮಾ
ಸೂಕ್ಷ್ಮತೆಯು ತಿಳಿಯುತ್ತದೆ. ಉದಾ : ಮೇಷರಾಶಿಯನ್ನೇ ತೆಗೆದು
ಕೊಳ್ಳಿ. ಅಶ್ವಿನಿಯ ನಾಲ್ಕು ಚರಣಗಳು, ಭರಣಿಯ ನಾಲ್ಕು ಚರಣಗಳು,
ಕೃತ್ತಿಕೆಯ ಮೊದಲನೇ ಚರಣ—ಈ ೯ ಚರಣಗಳ ೩೦° ರ ವ್ಯಾಪ್ತಿಗೆ ಮೇಷ
ರಾಶಿ ಅನ್ನುವರು.

ಎಪ್ರಿಲ್ ತಿಂಗಳಲ್ಲಿ ಮಂಗಳನು ಸಿಂಹಸ್ಥನಾಗಿರುವದರಿಂದ ಮೇಷ
ರಾಶಿಯವರಿಗೆ ಗೋಚರಿಯಿಂದ ಮಂಗಳನು ೫ನೇಯವನಾಗಿರುವದರಿಂದ
ಅಶುಭನು. ಆದರೆ ಈ ೫ನೇಯ ಮಂಗಳನು ಮೇಷ ರಾಶಿಯ ಎಲ್ಲ ನಕ್ಷತ್ರ
ದವರಿಗೂ ಅಶುಭನಾಗುವದಿಲ್ಲ. ಯಾಕೆಂದರೆ ಎಪ್ರಿಲ್ ತಿಂಗಳಲ್ಲಿ
ಸಿಂಹಸ್ಥನಾಗಿರುವ ಮಂಗಳನು ವಕ್ರಗತನಾಗಿ ೧೮ ಅಂಶದಿಂದ ೧೬
ಅಂಶದ ವರೆಗೆ ಸಿಂಹರಾಶಿಯಲ್ಲಿರುತ್ತಾನೆ. ಆದ್ದರಿಂದ ಮೇಷ ರಾಶಿಯ
ಅಶ್ವಿನಿ ನಾಲ್ಕು ಚರಣಗಳ ರಾಶಿಯವರಿಗೆ ಸಿಂಹ ರಾಶಿಯ ಮಂಗಳನು
ಅಂಶಾತ್ಮಕವಾಗಿ ೬ನೇಯವನಾಗುವನು. ಭರಣೀ ನಕ್ಷತ್ರದವರಿಗೆ ೫ನೇ-
ಯವನೂ ಕೃತಿಕಾ ನಕ್ಷತ್ರದ ಮೇಷ ರಾಶಿಯವರಿಗೆ ಸಿಂಹಸ್ಥ ರಾಶಿಯ
ಗೋಚರೀ ಮಂಗಳನು [illegible]ನೇಯವನೂ ಆಗುವನು. ಕಾರಣ ಫಲಗಳಲ್ಲಿ
ಅಂತರವು ಬರುವದು.

### ಸೂಕ್ಷ್ಮ ಫಲಗಳು

ಕೇವಲ ಮೇಷರಾಶಿಯವರಿಗೆ ಸಿಂಹಸ್ಥ ರವಿಯು ೫ನೇಯವ
ಅಶುಭನೆಂದು ಹೇಳುವದು ಶಾಸ್ತ್ರೋಕ್ತವೂ ಸೂಕ್ಷ್ಮವೂ ಅಸಮಂಜಸವೂ
ಆಗುವದಿಲ್ಲ. ಉದಾ : ಮೇಲಿನ ಅಶ್ವಿನಿ ನಕ್ಷತ್ರದ ಮೇಷರಾಶಿಯವರಿಗೆ
ಮಂಗಳನು ಅಶುಭನಾಗದೇ ಬಹಳೇ ಶುಭ ಫಲಗಳನ್ನು ಕೊಡುವನು.

ಕೃತ್ತಿಕಾ ನಕ್ಷತ್ರದ ಮೇಷರಾಶಿಯವರಿಗೆ ಮಂಗಳನು ೯ನೇಯವನಾಗುವ ದರಿಂದ ಭರಣೀ ನಕ್ಷತ್ರದವರಿಗಿಂತ ಹೆಚ್ಚು ಹಾನಿದಾಯಕನಾಗುವನು. ಭರಣೀ ನಕ್ಷತ್ರದವರಿಗೆ ೫ನೆಯ ಮಂಗಳನು ಅಶುಭನಿದ್ದರೂ ವಿಶೇಷ ಹಾನಿ ಯನ್ನುಂಟು ಮಾಡಲಾರ. ಆದುದರಿಂದ ನಿಯತ ಕಾಲಿಕ ಭವಿಷ್ಯವನ್ನು ಬರೆಯುವವರು, ಆದರಲ್ಲಿಯೂ ಸಾಪ್ತಾಹಿಕ ಭವಿಷ್ಯವನ್ನು ಬರೆಯುವವರು ಎಲ್ಲ ಗ್ರಹಗಳ ಅಂಶವನ್ನು ತೆಗೆದುಕೊಂಡು ಅಂಶಾತ್ಮಕವಾಗಿ ಬರೆಯ ಬೇಕು. ರಾಶಿ ಭವಿಷ್ಯಕ್ಕಿಂತ ನಕ್ಷತ್ರ ಭವಿಷ್ಯವೂ, ನಕ್ಷತ್ರದೊಂದಿಗೆ ಚರಣ ಗಳ ಭವಿಷ್ಯವೂ ಹೆಚ್ಚು ಹೆಚ್ಚು ಸೂಕ್ಷ್ಮ ಫಲಗಳನ್ನು ಕೊಡುತ್ತವೆ.

### ಶುಭಾಶುಭ ದಿನಾಂಕಗಳು

ಸಾಮಾನ್ಯವಾಗಿ ನಿಯತ ಕಾಲಿಕ ರಾಶಿ-ಭವಿಷ್ಯಗಳಲ್ಲಿ ಶುಭ, ಅಶುಭ ದಿನಾಂಕಗಳನ್ನು ಕೊಡುವರು. ಆದರೆ ಈ ದಿನಾಂಕಗಳಲ್ಲಿ ಕೇವಲ ಶುಭಾಶುಭಗಳೆಂದು ಸಂಕ್ಷಿಪ್ತವಾಗಿ ಬರೆಯದೇ ವಿವಿಧ ದೃಷ್ಟಿಯಿಂದ (Different Aspects) ಬರೆಯಬೇಕು.

ಆರ್ಥಿಕ, ಕೌಟುಂಬಿಕ, ಶಾರೀರಿಕ, ಔದ್ಯೋಗಿಕ, ಪ್ರವಾಸ ಸುದ್ದಿ-ಸಮಾಚಾರ, ಭೆಟ್ಟಿ, ಕಲಹ ಈ ಮುಂತಾದ ವಿವಿಧ ವಿಷಯಗಳಿ ಗಾಗಿ ವಿವಿಧ ದಿನಾಂಕಗಳಿದ್ದು, ಅವನ್ನು ಬೇರೆ ಬೇರೆಯಾಗಿ ಬರೆಯಬೇಕು.

ಈ ಶುಭಾಶುಭ ದಿನಾಂಕಗಳನ್ನು ನಿತ್ಯ ಚಂದ್ರನ ಗತಿಯಿಂದಲೇ ಹೆಚ್ಚಾಗಿ ಬರೆಯುತ್ತಿರುವರು. ಆದರೆ ಕೇವಲ ಚಂದ್ರನ ಗತಿಯಿಂದಲೇ ಬರೆಯದೇ ರವಿ, ಬುಧ, ಶುಕ್ರರ ಗತಿಯ ಮೇಲಿಂದಲೂ ಗೋಚರೀ ಗ್ರಹಗಳ ಗತಿಯಲ್ಲಿ ಆಗುತ್ತಿರುವ ಗ್ರಹಯೋಗ, ಗ್ರಹಯುತಿ ಇವುಗಳ ಮೇಲಿಂದಲೂ, ಫಲಗಳನ್ನು ಬರೆದರೆ ಹೆಚ್ಚು ಸೂಕ್ಷ್ಮವಾದ ಫಲಗಳು ತಿಳಿಯುತ್ತವೆ. ಉದಾಹರಣೆಗಾಗಿ ಯಾವದೊಂದು ರಾಶಿಯ, ಯಾರೊಬ್ಬ ನಿಗೆ ಗೋಚರಿಯಿಂದ ಚಂದ್ರನು ೮ನೆಯ ೭ನೆಯವನಾಗಿ ಬಂದರೆ—

ಕೌಟುಂಬಿಕ ವಿರಸ, ಕಲಹ ಕೊಡುವನು ಎಂದು ಫಲವಿದೆ— ತಿಳಿಯಿರಿ. ಇಲ್ಲಿ ಆದೇ ಗ್ರಹಸ್ಥನಿಗೆ ಅದೇ ಅವಧಿಯಲ್ಲಿ ಅರ್ಥಾತ್

ಅದೇ ದಿನಾಂಕಗಳಲ್ಲಿ ಗುರು, ಶುಕ್ರರು ಗೋಚರಿಯಿಂದ ಅಂಶಾತ್ಮಕವಾಗಿ ಶುಭರಾಗಿದ್ದಲ್ಲಿ, ಮೇಲಿನ ಅನಿಷ್ಟ ಫಲಗಳು ದೊರೆಯಲಾರವು. ಅದ್ದರಿಂದ ಕೇವಲ ಚಂದ್ರನ ಗೋಚರೀ ಗತಿಯ ಮೇಲಿಂದ ಫಲ ಬರೆಯದೇ, ಇತರ ಗ್ರಹಗಳ ಅಂಶಾಂತ್ಮಕ ಗತಿಯನ್ನು ಗಣನೆಗೆ ತಂದು ಶುಭಾ–ಶುಭ ದಿನಾಂಕಗಳನ್ನು ಬರೆಯುವದರಿಂದ, ಸೂಕ್ಷ್ಮಾಸೂಕ್ಷ್ಮ ಫಲಗಳು ದೊರೆಯುವವು.

**ತತ್ವಾನುಸಾರ ಫಲಾದೇಶ**

ನಿಯತ ಕಾಲಿಕ ಗ್ರಹಗತಿಯ ಫಲಗಳನ್ನು ಬರೆಯುವಾಗ ಕೇವಲ ಗ್ರಹಗತಿಗಳ ಫಲಾದೇಶ ಬರೆಯದೇ ತತ್ವಾನುಸಾರ ಬರೆಯಬೇಕು. ಅಂದರೆ ದಾಸರ, ಸತ್ಪುರುಷರ, ಮಹಾತ್ಮರ ಉಕ್ತಿ, ವಚನಗಳನ್ನು ಆಧರಿಸಿ, ಗೀತೆ, ಬಾಯಬಲ್, ಕುರಾಣ ಶುಭಾಷಿತ, ಶ್ಲೋಕಗಳ ಭಾವ–ಅರ್ಥಗಳನ್ನಾಧರಿಸಿ, ಹಿರಿಯರ ಗಾದೆಮಾತುಗಳನ್ನಾಧರಿಸಿ ಫಲಾದೇಶ ವನ್ನು ಬರೆಯಬೇಕಲ್ಲದೇ ಆ ಆ ಅವಧಿಯಲ್ಲಿ ಆಯಾ ರಾಶಿಯವರು ಹೇಗೆ ನಡೆಯಬೇಕೆಂಬುದನ್ನು ತಿಳಿಸಿದಲ್ಲಿ, ಜನರಲ್ಲಿರುವ ಭಯ, ನಿರುತ್ಸಾಹ ಅಪನಂಬಿಕೆ, ನಿರಾಶೆ, ಶೋಕ, ದುಃಖ ಮೊದಲಾದವುಗಳು ನಿವಾರಣೆಯಾಗಿ ಕರ್ತವ್ಯ, ಕರ್ಮ, ಜಾಗ್ರತೆ, ವಿಶ್ವಾಸಗಳು ಕುದುರು ವವು. ಇದರಂತೆಯೇ ಕಾಲವು ಅನುಕೂಲವಿದ್ದಾಗ ಹೇಗೆ ನಡೆಯ ಬೇಕೆಂಬುದನ್ನು ತಿಳಿಸಿದಲ್ಲಿ ಆಯಾ ರಾಶಿಯವರಿಗೆ ಉತ್ಸಾಹ, ಕಾರ್ಯ ತತ್ಪರತೆ, ಪ್ರಯತ್ನಗಳಿಗೆ ಪ್ರೋತ್ಸಾಹ ಕೊಟ್ಟಂತಾಗುವದು.

**ಸಾಹಿತ್ಯಾನುಸಾರ ಫಲಾದೇಶ**

ನಿಯತ ಕಾಲಿಕ ಭವಿಷ್ಯವನ್ನು ಬರೆಯುವಾಗ ಬಳಸುತ್ತಿರುವ ಶಬ್ದ ಗಳ ಕಡೆಗೂ ಲಕ್ಷವೀಯಬೇಕು ಗೋಚರೀ ಗ್ರಹಗಳ ಶುಭಾಶುಭ ಫಲಗಳನ್ನು ಬರೆಯುವಾಗ ನಿರ್ದಿಷ್ಟವಾದ, ನಿಶ್ಚಿತವಾದ, ನೇರವಾದು ನಿಯಮಿತವಾದ, ಶೀಲವಾದ ಶಬ್ದ–ವಾಕ್ಯಗಳನ್ನು ಉಪಯೋಗಿಸಬೇಕು. ಉದಾ—ಕಲಹ, ತಾಪ, ತ್ರಾಸು, ವ್ಯತ್ಯಾಸ, ಮನಸ್ತಾಪ, ಭಿನ್ನಾಭಿಪ್ರಾಯ ಈ ಶಬ್ದಗಳ ಗೂಢಾರ್ಥ ನಿಶ್ಚಾರ್ಥ ಒಂದೇ ಇದ್ದರೂ ಭಿನ್ನ

ಭಿನ್ನ ಶಬ್ದಗಳಿಗೆ ಪ್ರತ್ಯೇಕ ಅರ್ಥವಿದೆ. ನಿಯತ ಕಾಲಿಕ ಭವಿಷ್ಯವನ್ನು ಬರೆಯುವಾಗ ಗ್ರಹಗತಿಯನ್ನು ಹೇಗೆ ನೋಡಬೇಕು ? ಎಂಬುದಕ್ಕೆ ಏಪ್ರಿಲ್ ತಿಂಗಳ ಗ್ರಹಗತಿಯನ್ನು ಮಾದರಿಯನ್ನಾಗಿ ಕೊಟ್ಟು ವಿವೇಚಿಸಲಾಗಿದೆ.

### ಗ್ರಹಗತಿ

**ರವಿ**— ರವಿಯು ಈ ಮಾಸದಲ್ಲಿ ೧೩ ನೆಯ ತಾರೀಖಿನ ವರೆಗೆ ಮೀನ ರಾಶಿಯಲ್ಲಿಯೂ, ತದನಂತರ ಮಾಸಾಂತ್ಯದ ವರೆಗೆ ಮೇಷರಾಶಿಯಲ್ಲಿಯೂ ಸಂಚರಿಸುತ್ತಾನೆ.

ಮಂಗಳ— ಮಂಗಳನು ಇಡೀ ತಿಂಗಳು ವಕ್ರಗತನಾಗಿ ಸಿಂಹರಾಶಿಯಲ್ಲಿ ಸಂಚರಿಸುತ್ತಾನೆ.

ಬುಧ— ಬುಧನು ಈ ತಿಂಗಳು ವಕ್ರೀ ಅಸ್ತನಾಗಿ ೧೮ ನೆಯ ತಾರೀಖಿನ ವರೆಗೆ ಹಾಗೂ ವಕ್ರೀ ಉದಯನಾಗಿ ಮಾಸಾಂತ್ಯದ ವರೆಗೂ ಮೀನರಾಶಿಯಲ್ಲಿ ಸಂಚರಿಸುವನು.

ಗುರು— ಇಡೀ ತಿಂಗಳು ವೃಷಭರಾಶಿಯಲ್ಲಿ ಸಂಚರಿಸುತ್ತಾನೆ.

ಶುಕ್ರ— ಶುಕ್ರನು ಈ ತಿಂಗಳ ೧೨ ನೆಯ ತಾರೀಖಿನ ವರೆಗೆ ಅಸ್ತನಾಗಿ ಮೀನ ರಾಶಿಯಲ್ಲಿಯೂ, ಮುಂದೆ ಮಾಸಾಂತ್ಯದ ವರೆಗೆ ಅಸ್ತನಾಗಿ ಮೇಷ ರಾಶಿಯಲ್ಲಿಯೂ ಸಂಚರಿಸುತ್ತಾನೆ.

ಶನಿ— ಇಡೀ ತಿಂಗಳು ಕುಂಭ ರಾಶಿಯಲ್ಲಿ ಸಂಚಾರವು.

ರಾಹು-ಕೇತು— ರಾಹು ಇಡೀ ತಿಂಗಳು ವೃಷಭದಲ್ಲಿಯೂ, ಕೇತು.. ಇಡೀ ತಿಂಗಳು ವೃಶ್ಚಿಕದಲ್ಲಿಯೂ ಸಂಚರಿಸುತ್ತಾರೆ.

ಚಂದ್ರ— ಎರಡೂ ಕಾಲು ದಿನಕ್ಕೆ ಒಂದು ರಾಶಿಯಂತೆ ಇಡೀ ತಿಂಗಳು ಎಲ್ಲ ರಾಶಿಗಳಲ್ಲಿ ಸಂಚಾರವಿರುತ್ತದೆ. ಇದಕ್ಕಾಗಿ ಮುಂದಿನ ಪುಟದಲ್ಲಿರುವ ಕೋಷ್ಟಕವನ್ನು ನೋಡಿರಿ. ಈ ಕೋಷ್ಟಕದಿಂದ ಆಯಾ ರಾಶಿಯವರಿಗೆ ಎಪ್ರಿಲ್ ತಿಂಗಳ ಗ್ರಹಗತಿಗಳು ತಿಳಿಯುತ್ತವೆ.

ಶುಭಾ-ಶುಭ ಗ್ರಹಗಳು— ಮೇಲಿನ ಕೋಷ್ಟಕದಲ್ಲಿ ಆಯಾ ರಾಶಿಯವರಿಗೆ ಆಯಾ ಗ್ರಹಗಳು ಗೋಚರಿಯಿಂದ ಎಷ್ಟನೆಯವರಾಗುವರೆಂಬುದನ್ನು ಕಂಡುಕೊಳ್ಳಬಹುದು. ಇದರ ಮೇಲಿಂದ ಯಾವ ಗ್ರಹಗಳು ಶುಭರು, ಯಾವ ಗ್ರಹಗಳು ಅಶುಭರು, ಎಂಬುದು ತಿಳಿಯುವದು.

**ಆಯಾ** ರಾಶಿಗಳಿಗೆ ಗೋಚರಿಯಿಂದ ಗ್ರಹಗಳು ಎಷ್ಟನೆಯವರಿರುತ್ತಾರೆಂಬುದನ್ನು ಈ ಕೋಷ್ಟಕದಲ್ಲಿ ಕೊಡಲಾಗಿದೆ.

| ರಾಶಿ | ಗ್ರಹಗಳು | | | | | | | |
|---|---|---|---|---|---|---|---|---|
| | ರವಿ | ಮಂಗಳ | ಬುಧ | ಗುರು | ಶುಕ್ರ | ಶನಿ | ರಾಹು | ಕೇತು |
| ಮೇಷ | ೧೨-೧ | ೫ | ೧೨ | ೨ | ೧೨-೧ | ೧೧ | ೨ | ೮ |
| ವೃಷಭ | ೧೧-೧೨ | ೪ | ೧೧ | ೧ | ೧೧-೧೨ | ೧೦ | ೧ | ೭ |
| ಮಿಥುನ | ೧೦-೧೧ | ೩ | ೧೦ | ೧೨ | ೧೦-೧೧ | ೯ | ೧೨ | ೬ |
| ಕರ್ಕ | ೯-೧೦ | ೨ | ೯ | ೧೧ | ೯-೧೦ | ೮ | ೧೧ | ೫ |
| ಸಿಂಹ | ೮-೯ | ೧ | ೮ | ೧೦ | ೮-೯ | ೭ | ೧೦ | ೪ |
| ಕನ್ಯಾ | ೭-೮ | ೧೨ | ೭ | ೯ | ೭-೮ | ೬ | ೯ | ೩ |
| ತುಲಾ | ೬-೭ | ೧೧ | ೬ | ೮ | ೬-೭ | ೫ | ೮ | ೨ |
| ವೃಶ್ಚಿಕ | ೫-೬ | ೧೦ | ೫ | ೭ | ೫-೬ | ೪ | ೭ | ೧ |
| ಧನು | ೪-೫ | ೯ | ೪ | ೬ | ೪-೫ | ೩ | ೬ | ೧೨ |
| ಮಕರ | ೩-೪ | ೮ | ೩ | ೫ | ೩-೪ | ೨ | ೫ | ೧೧ |
| ಕುಂಭ | ೨-೩ | ೭ | ೨ | ೪ | ೨-೩ | ೧ | ೪ | ೧೦ |
| ಮೀನ | ೧-೨ | ೬ | ೧ | ೩ | ೧-೨ | ೧೨ | ೩ | ೯ |

ಯಾವ ಯಾವ ಗ್ರಹಗಳು ಎಷ್ಟನೆಯವರಿದ್ದಾಗ ಯಾವ ಯಾವ ಫಲಗಳನ್ನು ಕೊಡುತ್ತವೆಂಬುದನ್ನು ಹಿಂದಿನ ಪ್ರಕರದಲ್ಲಿ ಕೊಲಾಗಿದೆ.

ಉದಾ : ಮೇಷ ರಾಶಿಯನ್ನೇ ತೆಗೆದುಕೊಳ್ಳೋಣ. ಈ ರಾಶಿಯವರಿಗೆ ರವಿಯು ೧೨-೧ ನೆಯನಾಗುವವರಿಂದ ಅಶುಭನು. ಮಂಗಳನು ೫ ನೇಯವನಾಗುವದರಿಂದ ಅಶುಭನು ಬುಧನು ೧೨ನೆಯವನಾಗುವರಿಂದ ಅಶುಭನು. ಗುರುವು ೨ನೆಯವನಾಗುವದರಿಂದ ಶುಭನು. ಶುಕ್ರನು ೧೨-೧ನೆಯವನಾಗುವದರಿಂದ ಶುಭನು. ಶನಿಯು ೧೧ನೆಯವನಾಗುವದರಿಂದ ಅತ್ಯಂತ ಶುಭನು. ರಾಹು-ಕೇತು ೨-೮ ನೇ ಯವರಾಗುವದರಿಂದ ಅಶುಭರು. ಇದು ಮೇಷ ರಾಶಿಯ ಎಪ್ರಿಲ್ ತಿಂಗಳ ಗೋಚರೀ ಗ್ರಹಗಳ ಶುಭಾಶುಭ ಫಲವು.

ಫಲ ಹೇಗೆ ?- ಯಾವ ಗ್ರಹಗಳು ಎಷ್ಟನೆಯದರಿದ್ದಾಗ ಯಾವ ಫಲ ಕೊಡುವರೆಂಬುದು ಹಿಂದಿನ ಪುಟದಿಂದ ತಿಳಿಯುತ್ತದೆ. ಇದನ್ನು ಇದೇ ಪ್ರಕರಣದಲ್ಲಿ ಬರೆದಂತೆ ಅಂಶಾತ್ಮಕವಾಗಿಯೂ ವರ್ಗಾನುಸಾರ, ವಿಷಯಾನುಸಾರವಾಗಿಯೂ ಬರೆಯಬೇಕು.

ಇನ್ನು ಸಾಪ್ತಾಹಿಕ ರಾಶಿ ಭವಿಷ್ಯವನ್ನು ಹೇಗೆ ಬರೆಯಬೇಕು ? ಎಂಬುದಕ್ಕೆ ೧೭-೪-೬೫ ರಿಂದ ೨೩-೪-೬೫ ರ ಅವಧಿಯ ಸಾಪ್ತಾಹಿಕ ಗ್ರಹಗತಿಯನ್ನು ಮಾದರಿಯನ್ನಾಗಿ ಕೊಟ್ಟು ವಿವೇಚಿಸಲಾಗಿದೆ.

(ಕೋಷ್ಟಕ ಮುಂದಿನ ಪುಟದಲ್ಲಿ)

| ಗ್ರಹ | ರಾಶಿ | ಅಂಶ |
| --- | --- | --- |
| ರವಿ | ಮೇಷದಲ್ಲಿ | ೪ ರಿಂದ ೧೦ರ ವರೆಗ |
| ಮಂಗಳ | ಸಿಂಹದಲ್ಲಿ | ೧೬ ರಿಂದ ೧೫ರ ವರೆಗೆ |
| ಬುಧ | ಮೀನದಲ್ಲಿ | ೨೦ ರಿಂದ ೧೯ರ ವರೆಗೆ |
| ಗುರು | ವೃಷಭದಲ್ಲಿ | ೬ ರಿಂದ ೮ ರ ವರೆಗೆ |
| ಶುಕ್ರ | ಮೇಷದಲ್ಲಿ | ೭ ರಿಂದ ೧೪ರ ವರೆಗ |
| ಶನಿ | ಕುಂಭದಲ್ಲಿ | ೨೧° |
| ರಾಹು | ವೃಷಭದಲ್ಲಿ | ೨೩° |
| ಕೇತು | ವೃಶ್ಚಿಕದಲ್ಲಿ | ೨೩° |
| ಚಂದ್ರ | ತುಲಾದಿಂದ ಮಕರದವರೆಗೆ ಸಂಚಾರ | —— |

ಸಾಮಾನ್ಯವಾಗಿ ಸಾಪ್ತಾಹಿಕ ರಾಶಿಭವಿಷ್ಯವನ್ನು ಬರೆಯುವಾಗ ಕೇವಲ ಚಂದ್ರನ ಗತಿಗೆ ಹೆಚ್ಚಾಗಿ ಪ್ರಾಮುಖ್ಯತೆ ಕೊಟ್ಟು ಬರೆಯುವರು. ಆದರೆ ಇದು ಅಷ್ಟು ಸೂಕ್ಷ್ಮ ಫಲವನ್ನು ಕೊಡಲಾರದು. ಚಂದ್ರನ ಗತಿಯ ಸಂಗಡ ಇತರ ಗ್ರಹಗಳ ಗತಿಯನ್ನು ಗಣನೆಗೆ ತಂದರೆ, ಹೆಚು ಸೂಕ್ಷ್ಮಾ ಸೂಕ್ಷ್ಮ ಫಲಗಳು ದೊರೆಯುವವು.

ಎರಡನೇಯದಾಗಿ ಎಲ್ಲ ಗ್ರಹಗಳ ಆಯಾ ಸಾಪ್ತಾಹಿಕದಲ್ಲಿಯ ಅಂಶವನ್ನು (degree) ತೆಗೆದು, ಆಯಾ ರಾಶಿಯವರಿಗೆ ಶುಭಾಶುಭ ಫಲು ವನ್ನು ಬರೆಯಬೇಕು. ಮೂರನೆಯನಾಗಿ ಎಲ್ಲ ಗ್ರಹಗಳ ಗೋಚರಿ ಗತಿಯನ್ನು ಕೇವಲ ಜನ್ಮ ರಾಶಿಯಿಂದ ಬರೆಯದೇ, ನಕ್ಷತ್ರಗಳ ಚರಣಾ ನ್ವಯದಿಂದ ಬರೆದರೆ ಆಯಾ ರಾಶಿಯ, ಆಯಾ ನಕ್ಷತ್ರದ, ಆಯಾ ಚರಣದ ಜನರಿಗೆ ಸೂಕ್ಷ್ಮ ಫಲಗಳು ದೊರೆಯುತ್ತವೆ. ಏಕೆಂದರೆ ಯಾವದೊಂದು ರಾಶಿಯ, ಯಾವದೊಂದು ನಕ್ಷತ್ರದ, ಯಾವದೊಂದು ಚರಣದ ಎಲ್ಲ ಜನರಿಗೂ ಯಾವದೊಂದು ಅವಧಿಯ ಯಾವದೊಂದು ಗ್ರಹದ ಫಲಗಳು ಏಕಕಾಲಕ್ಕೆ ಬರಲಾರವು.

ಉದಾಹರಣೆಗಾಗಿ ಮೇಷರಾಶಿಯವರಿಗೆ ಮೇಲಿನ ಕೋಷ್ಟಕದ ಅನುಸಾರವಾಗಿ ಗ್ರಹಗತಿಯನ್ನು ನೋಡಿರಿ.

ಮೇಷರಾಶಿಯವರಿಗೆ ಮೇಲ್ಕಂಡ ಅವಧಿಯಲ್ಲಿ ರವ್ಯಾದಿ ಗ್ರಹಗತಿ ಯನ್ನು ನೋಡಲಾಗಿ, ರವಿಯು ಗತಿಯು ಮೇಷದಲ್ಲಿರುವ ಕಾರಣ ಜನ್ಮಸ್ಥ ನಾಗಿದ್ದಾನೆ. ಆದರೆ ರವಿಯು ಈ ಅವಧಿಯಲ್ಲಿ ೪ ರಿಂದ ೧೧ ಅಂಶ, ಮೇಷದಲ್ಲಿಯ ಪರಿಭ್ರಮಣವು ಇರುತ್ತದೆ. ಆದ್ದರಿಂದ ಅಶ್ವಿನೀ ನಕ್ಷತ್ರದ ಪ್ರಥಮ ಚರಣದ ಮೇಷ ರಾಶಿಯವರಿಗೆ ಈ ಮೇಷಸ್ಥ ರವಿಯು ೨ನೆಯ ಹಾಗೂ ೩ನೆಯ ರವಿಯಾಗುವನು. ಅಶ್ವಿನೀ ನಕ್ಷತ್ರದ ದ್ವಿತೀಯ ಚರಣದ ಮೇಷ ರಾಶಿಯವರಿಗೆ ಈ ಮೇಷಸ್ಥ ರವಿಯು ಈ ಅವಧಿಯಲ್ಲಿ ಜನ್ಮಸ್ಥ ಹಾಗೂ ದ್ವಿತೀಯನಾಗುವನು. ಅಶ್ವಿನೀ ನಕ್ಷತ್ರದ ತೃತೀಯ ಚರಣದ ಮೇಷ ರಾಶಿಯವರಿಗೆ ಈ ಮೇಷಸ್ಥ ರವಿಯು ಈ ಅವಧಿಯಲ್ಲಿ ೧೨ನೆಯ ಹಾಗೂ ಜನ್ಮಸ್ಥನಾಗುವನು. ಇದರಂತೆಯೇ ಭರಣಿ ಹಾಗೂ ಕೃತ್ತಿಕಾ

ನಕ್ಷತ್ರದ ಭಿನ್ನ ಭಿನ್ನ ಚರಣದ ರಾಶಿಯವರಿಗೆ ಬೇರೆ ಬೇರೆ ರವಿಯಾಗು
ವನು. ಆದ್ದರಿಂದ ಮೇಷ ರಾಶಿಯ ಯಾವದೊಂದು ನಕ್ಷತ್ರದ ಯಾವ
ದೊಂದು ಚರಣದ ರಾಶಿಯವರಿಗೆ ಒಂದೇ ರಾಶಿಯಲ್ಲಿಯ ಗ್ರಹಗತಿಯು
ಫಲಗಳಲ್ಲಿ ಒಂದೇ ಅವಧಿಯಲ್ಲಿಯೂ ಭಿನ್ನ ಭಿನ್ನ ಫಲಗಳು ದೊರೆಯು
ತ್ತವೆ ಇದರಂತೆಯೇ ಎಲ್ಲ ಗ್ರಹಗಳ ಸಾಪ್ತಾಹಿಕ ಅವಧಿಯ ಅಂಶ.
ವನ್ನು ತೆಗೆದು ಯಾವದೊಂದು ರಾಶಿಯವರಿಗೆ ಬೇರೆ ಬೇರೆ ಫಲಗಳು
ದೊರೆಯುವದರಿಂದ, ಕೇವಲ ಚಂದ್ರನ ಗತಿಯ ಮೇಲಿಂದಲೂ, ಗ್ರಹಗಳ
ಸ್ಥೂಲ ಪರಿಭ್ರಮಣದ ಮೇಲಿಂದಲೂ ರಾಶಿ ಭವಿಷ್ಯವನ್ನು ಬರೆಯದೇ,
ನಕ್ಷತ್ರಗಳ ಚರಣಾನುಸಾರ ರಾಶಿಭವಿಷ್ಯವನ್ನು ಬರೆಯಬೇಕು.



# ಗ್ರಹಗತಿಯನ್ನು ಹೇಗೆ ನೋಡಬೇಕು ?

ಗ್ರಹಗತಿಯನ್ನು ಹೇಗೆ ನೋಡಬೇಕು ? ಯಾವ ರೀತಿ ಅರ್ಥಾನ್ವಯ ಮಾಡಬೇಕು ? ಶುಭಾ-ಶುಭ ಫಲಗಳಲ್ಲಿಯ ತಾರತಮ್ಯ, ಗ್ರಹಗಳ ಮೇಲಿಂದ ಗೋಚರೀ ಗ್ರಹಗಳ ಪರಿಭ್ರಮಣ, ಸ್ಥಾನಗಳ ಮೇಲಿಂದ ಗೋಚರೀ ಗ್ರಹಗಳ ಪರಿಭ್ರಮಣ, ಗ್ರಹಯೋಗ, ಗ್ರಹಾವಸ್ಥೆ, ದಶಾ ಪದ್ಧತಿಯಿಂದ ಗ್ರಹಗತಿಯ ವಿಚಾರ-ಈ ಮೊದಲಾದ ಸಂಗತಿಗಳನ್ನು ಹೇಗೆ ಪರಿಶೀಲಿಸಬೇಕೆಂಬುದನ್ನು ಈ ಪ್ರಕರಣದಲ್ಲಿ ವಿವರಿಸಲಾಗಿದೆ.

ರವ್ಯಾದಿ ನವಗ್ರಹಗಳ ಗೋಚರೀ ಗತಿಯ ಪರಿಣಾಮವನ್ನು ಕೇವಲ ಜನ್ಮರಾಶಿಯಿಂದ ನೋಡದೇ ಜನ್ಮಕುಂಡಲಿ ( ಜಾತಕ ) ಯಿಂದ ಪರಿ-ಶೀಲಿಸಿದರೆ ಸೂಕ್ಷ್ಮ ಫಲಗಳು ತಿಳಿಯುವವು. ಮೊದಲನೆಯದಾಗಿ ನಾವು ಜಾತಕಗಳನ್ನು ಎದುರಿಗೆ ಇಟ್ಟುಕೊಂಡು ನೋಡುವ ಪೂರ್ವದಲ್ಲಿ, ಜನ್ಮ ಪತ್ರಿಕೆಯ ಮೇಲಿಂದ ಯಾವ ಯಾವ ವಿಷಯಗಳನ್ನು ಪಡೆದುಕೊಂಡು ಬಂದಿದ್ದೇವೆ, ಅರ್ಥಾತ್ ಯಾವ ವಿಷಯಗಳನ್ನು ಜನ್ಮಾರಭ್ಯ ಸಂಸ್ಕಾರ ರೂಪದಿಂದ ಪಡೆದುಕೊಂಡು ಬಂದಿದ್ದೇವೆ; ಯಾವ ಯಾವ ವಿಷಯ ಗಳನ್ನು ಪಡೆದುಕೊಂಡು ಬಂದಿಲ್ಲ; ಜಾತಕದ ಬೆಲೆ ಎಷ್ಟು ? (Strength and value of the horoscopec) ಜನ್ಮಪತ್ರಿಕೆಯಲ್ಲಿ ಗ್ರಹಗಳ ಯೋಗ ಹೇಗೆ ? ಈ ಮೊದಲಾದ ಸಂಗತಿಗಳನ್ನು ತಿಳಿದುಕೊಳ್ಳಬೇಕು. ಇದಲ್ಲದೇ ಗೋಚರೀ ಗ್ರಹಗಳ ಪರಿಭ್ರಮಣವು ಜಾತಕದ ಮೇಲಿಂದ ಆಗುವಾಗ ಮೂಲ ಗ್ರಹಗಳಿಂದಾಗುವ ಯೋಗ-ಈ ಎಲ್ಲ ಸಂಗತಿಗಳು ತಿಳಿಯುವವು. ಉದಾ: ವೃಶ್ಚಿಕ ಲಗ್ನ ಸಿಂಹರಾಶಿಯ ಚಂದ್ರನಿರುವ ಜಾತಕವಿದೆ ಎಂದು ತಿಳಿಯಿರಿ. ಗೋಚರಿಯಿಂದ ರವಿಯ ಪರಿಭ್ರಮಣವು ಇಲ್ಲಿ ತುಲಾರಾಶಿಯಲ್ಲಿ ಆಗುವಾಗ ಅಂದರೆ ಪ್ರತಿವರ್ಷ ಅಕ್ಟೋಬರ ೧೫ರಿಂದ ನವ್ಹಂಬರ ೧೫ರ ವರೆಗಿನ ಅವಧಿಯು ಸಿಂಹ ರಾಶಿಯವರಿಗೆ ೩ನೆಯ ರವಿ

ಇರುವವರಿಂದ ಶುಭ ಫಲಗಳು ಸಿಗುವದೆಂದು ಮಾಸಭವಿಷ್ಯ ಮತ್ತು ಸಾಪ್ತಾಹಿಕ ಭವಿಷ್ಯ ಮೊದಲಾದ ನಿಯತಕಾಲಿಕ ಭವಿಷ್ಯಗಾರರು ಭವಿಷ್ಯವನ್ನು ಬರೆಯುವವರೆಂದು ತಿಳಿಯಿರಿ. ಆದರೆ ಮೇಲ್ಕಂಡ ವೃಶ್ಚಿಕ ಲಗ್ನದ ಸಿಂಹರಾಶಿಯುವರಿಗೆ ಹಿನೆಯ ರವಿಯು ಹಾನಿಯನ್ನುಂಟು ಮಾಡುವನು. ಏಕೆಂದರೆ ವೃಶ್ಚಿಕ ಲಗ್ನಕ್ಕೆ ರವಿಯು ಯೋಗಕಾರಕ ಗ್ರಹ ಗಳಲ್ಲಿ ಒಬ್ಬನಾಗಿರುವದರಿಂದ, ಅವನ ಪರಿಭ್ರಮಣ ಅರ್ಥಾತ್ ದಶಮೇಶ ಪರಿಭ್ರಮಣ ವ್ಯಯಸ್ಥಾನದ ಮೇಲಿಂದಾಗುವಾಗ ಹೇಗೆ ಶುಭ ಫಲಗಳು ಸಿಗುವವು ?

ಇದರಂತೆಯೇ ಇನ್ನೊಂದು ಉದಾಹರಣೆ ತೆಗೆದು ಕೊಳ್ಳಿ. ವೃಶ್ಚಿಕ ಲಗ್ನವಿದ್ದು ಷಷ್ಠದಲ್ಲಿ ಮೇಷರಾಶಿಯ ಶನಿಯೂ ಸಿಂಹರಾಶಿಯ ಚಂದ್ರನೂ ದಶಮದಲ್ಲಿರುವ ಜಾತಕವಿದೆ ಎಂದು ತಿಳಿಯಿರಿ. ಮೇಲಿನಂತೆಯೇ ಗೋಚರೀ ರವಿಯ ಪರಿಭ್ರಮಣವು ತುಲಾ ರಾಶಿಯಲ್ಲಾಗುವಾಗ, ಅಂದರೆ-ಪ್ರತಿವರ್ಷ ಅಕ್ಟೋಬರ ೧೬ ರಿಂದ ನವ್ಹಂಬರ ೧೫ ರ ವರೆಗೆ ಈ ಜಾತಕ ( ಸಿಂಹ ರಾಶಿಯ ) ದವರಿಗೆ ಹಿನೆಯ ರವಿಯಂತೆ ಶುಭ ಫಲ ದೊರೆಯದೇ ಭೀಕರವಾದ ಅಶುಭ ಫಲ ದೊರೆಯುವದು. ಏಕೆಂದರೆ ಯೋಗಕಾರಕ ರವಿಯ ಪರಿಭ್ರಮಣವು ನೀಚ ರಾಶಿಯ ವ್ಯಯ-ಸ್ಥಾನದಲ್ಲಿ, ನೀಚರಾಶಿಯ ಷಷ್ಠದಲ್ಲಿರುವ ಶನಿಯೊಂದಿಗಿರುವ ಪ್ರತಿಯೋಗವು ಹಾನಿಯನ್ನು ವರ್ಧಿಸುವದಲ್ಲದೆ ಶುಭ ಫಲ ಕೊಡ-ಲಾರದು.

ಶುಭಾಶುಭ ಫಲಗಳಲ್ಲಿಯ ತಾರತಮ್ಯ

ಶುಭಾಶುಭ ಫಲಗಳಲ್ಲಿಯೂ ತಾರತಮ್ಯವಿದೆ. ಅವುಗಳನ್ನು ಗೋಚರಿ ಗ್ರಹಗಳ ಗತಿಯ ಮೇಲಿಂದಲೂ, ಮೂಲ ಗ್ರಹಗಳಿಂದಾಗುವ ಯೋಗ ಗಳ ಮೇಲಿಂದಲೂ, ಗೋಚರೀ ಗ್ರಹಗಳ ಸಂಚಾರವು ಮೂಲ ಜಾತಕ ಗಳ ಸ್ಥಾನಗಳ ಮೇಲಿಂದಾಗುವ ಪರಿಣಾಮ ಮತ್ತು ಜಾತಕದ ಬಲಾ ಬಲದ ಮೇಲಿಂದ ನಿರ್ಧರಿಸಬೇಕಾಗುತ್ತದೆ. ಉದಾಹರಣೆಗಾಗಿ ಈ ಕೆಳಗೆ ಕಾಣಿಸಿದ ಮೂರು ಜಾತಕಗಳನ್ನು ನೋಡಿರಿ—

೧) ವೃಶ್ಚಿಕ ಲಗ್ನ, ಷಷ್ಠದಲ್ಲಿ ಶನಿ, ಕನ್ಯಾರಾಶಿಯಚಂದ್ರನಿರುವ ಒಂದು ಜಾತಕ.

೨) ವೃಶ್ಚಿಕ ಲಗ್ನವಿದ್ದು; ಷಷ್ಠದಲ್ಲಿ ಶನಿ, ವ್ಯಯದಲ್ಲಿ ತುಲಾ ರಾಶಿಯ ಚಂದ್ರನಿರುವ ಇನ್ನೊಂದು ಜಾತಕ.

೩) ವೃಷಭ ಲಗ್ನವಿದ್ದು, ವ್ಯಯಸ್ಥಾನದಲ್ಲಿ ಶನಿಯೂ ಮೀನ ರಾಶಿಯ ಲಾಭಗಳಲ್ಲಿ ಚಂದ್ರನಿರುವ ಮೂರನೆಯ ಜಾತಕ.

ಗೋಚರಿಯಿಂದ ರವಿಯ ತುಲಾ ರಾಶಿಯ ಪರಿಭ್ರಮಣವು ಅರ್ಥಾತ್ ಪ್ರತಿವರ್ಷ ಅಕ್ಟೋಬರ ೧೫ ರಿಂದ ನವೆಂಬರ ೧೫ ರ ವರೆಗಿನ ಅವಧಿಯು, ಈ ಮೂರೂ ಜಾತಕದವರಿಗೆ ಭಿನ್ನ ಭಿನ್ನ ಫಲಗಳನ್ನು ಕೊಡುತ್ತವೆ. ಮೊದಲನೆಯ ಜಾತಕದವನಿಗೆ ಔದ್ಯೋಗಿಕ ಹಾನಿಯ ಮೂಲಕ ಆರ್ಥಿಕ ಹಾನಿಯನ್ನೂ ಕೊಡುವನು. ಏಕೆಂದರೆ ದಶಮೇಶನ ಪರಿಭ್ರಮಣ ವ್ಯಯ-ಸ್ಥಾನದಲ್ಲಿ ಚತುರ್ಥೇಶನೊಂದಿಗೆ ಸಮಸಪ್ತಕ ಯೋಗ ಮೇಲಾಗಿ ಗೋಚರಿಯ ೨ನೆಯ ರವಿ ಆದ್ದರಿಂದ ಉದ್ಯೋಗದ ಮೂಲಕ ಆರ್ಥಿಕ ಹಾನಿಯು ಸಂಭವಿಸುತ್ತದೆ. ಎರಡನೆಯ ಜಾತಕದವನಿಗೆ ಮೇಲ್ಕಂಡ ಅವಧಿಯಲ್ಲಿ ಶಾರೀರಿಕ ಅಸ್ವಸ್ಥತೆಯನ್ನುಂಟುಮಾಡುತ್ತದೆ. ಏಕೆಂದರೆ ಮೂಲ ಜಾತಕದಲ್ಲಿ ಶನಿ-ಚಂದ್ರರ ಸಮಸಪ್ತಕವು ಷಷ್ಠ ಹಾಗೂ ವ್ಯಯದಲ್ಲಿರುವದು ಕೃಶ ಪ್ರಕೃತಿಯ ಲಕ್ಷಣವು. ಮೇಲೆ ಗೋಚರಿಯ ರವಿಯ ಭ್ರಮಣವು ತುಲಾರಾಶಿ ಇರುವದರಿಂದ ಜನ್ಮಸ್ಥ ರವಿಯೂ, ನೀಚ ರಾಶಿಯ ರವಿಯೂ, ವ್ಯಯ ಸ್ಥಾನದಲ್ಲಿಯ ರವಿಯೂ ಆರೋಗ್ಯ ಕೆಡಿಸುವದರಲ್ಲಿ ಇನ್ನಷ್ಟು ಸಹಾಯಕವಾಗುವದು. ಮೇಲಾಗಿ ಮೂಲ ಜಾತಕದಲ್ಲಿಯ ನೀಚ ರಾಶಿಯ ಷಷ್ಠದಲ್ಲಿರುವ ಮೇಷರಾಶಿಯ ಶನಿಯೊಂದಿಗೆ ನೀಚ ರಾಶಿಯ ಗೋಚರೀ ರವಿಯ ಸಮಸಪ್ತಕವು ಮತ್ತಿಷ್ಟು ಆರೋಗ್ಯಕ್ಕೆ ಹಾನಿದಾಯಕವಾಗುತ್ತದೆ. ಕಾರಣ ಮೇಲಿನ ಜಾತಕವು ಆರೋಗ್ಯದ ದೃಷ್ಟಿಯಿಂದ ಕೆಡುಕು.

ಇದರಂತೆಯೇ ಮೂರನೆಯ ಜಾತಕದವನಿಗೆ ಕೌಟುಂಬಿಕ ವಿರಸವನ್ನು ಕೊಡುವನು. ಏಕೆಂದರೆ ಚತುರ್ಥೇಶನ ಪರಿಭ್ರಮಣವು ನೀಚ

ರಾಶಿಯ ಷಷ್ಠದಲ್ಲಿಯೂ ಜನ್ಮರಾಶಿಯ ಅಷ್ಟಮನಾಗಿಯೂ ಮೇಲೆ ಯೋಗಕಾರಕ ಹಾಗೂ ನೀಚ ರಾಶಿಯಲ್ಲಿರುವ ಶನಿಯೊಂದಿಗೆ ಪ್ರತಿ ಯೋಗವೂ ಆಗಿ ಕೌಟುಂಬಿಕ ವಿರಸವನ್ನು ಕೊಡುವನು. ಮೇಲಾಗಿ ಅಷ್ಟಮ ರವಿಯು ಕೌಟುಂಬಿಕ ವಿರಸವನ್ನು ಕೊಡುವನು. ಆದ್ದರಿಂದ ಗೋಚರಿಯ ಗ್ರಹಗಳ ಪರಿಭ್ರಮಣದ ಫಲಗಳನ್ನು ಪರಿಶೀಲಿಸುವಾಗ ಮೂಲ ಜಾತಕದೊಂದಿಗೆ ಪರಿಶೀಲಿಸುವದು ಹೆಚ್ಚು ಶ್ರೇಯಸ್ಕರ. ಕೇವಲ ಮೂರು, ಆರು, ಹತ್ತನೆಯ ರವಿಯರು ಶುಭರೂ ಎರಡನೆಯ, ಐದನೆಯ ಗುರು ಶುಭನು–ಎಂದು ವಿಚಾರಿಸುವದರಲ್ಲಿ ಸರಿಯಾದ, ಸಮರ್ಪಕವಾದ, ಸೂಕ್ಷ್ಮವಾದ ಫಲಗಳು ತಿಳಿಯಲಾರವು.

## ಗ್ರಹಗಳ ಮೇಲಿಂದ ಗೋಚರೀ ಗ್ರಹಗಳ ಪರಿಭ್ರಮಣ

ರವ್ಯಾದಿ ನವಗ್ರಹಗಳು ಗೋಚರಿಯಿಂದ ಪರಿಭ್ರಮಿಸುವಾಗ ಜನ್ಮ ರಾಶಿಯಿಂದ ಎಷ್ಟನೆಯವರಾದರೆ ಯಾವ ಯಾವ ಫಲಗಳು ದೊರೆಯು ವವು ? ಮತ್ತು ಜನ್ಮರಾಶಿಯಿಂದ ಎಷ್ಟನೆಯವರಾಗುವದು ಎಷ್ಟು ಮಹತ್ವದ ಸಂಗತಿಯೋ, ಅಷ್ಟೇ ಮಹತ್ವದ ಸಂಗತಿಯು ಮೂಲ ಗ್ರಹಗಳ ಮೇಲಿಂದ ಭ್ರಮಿಸುವದೂ ಇರುತ್ತದೆ. ಏಕೆಂದರೆ ಜನ್ಮ ರಾಶಿಯಿಂದ ಗೋಚರೀ ಗ್ರಹಗಳು ಶುಭರಿದ್ದಾಗ್ಯೂ ಕೂಡ, ಮೂಲ ಗ್ರಹಗಳ ಮೇಲಿಂದ ಇವುಗಳ ಪರಿಭ್ರಮಣವು ಕೆಲವೊಮ್ಮೆ ಅಶುಭ ಫಲವನ್ನು ಕೊಡುತ್ತವೆ.

ಉದಾ: ಸಿಂಹ ಲಗ್ನವಿದ್ದು, ಲಗ್ನದಲ್ಲಿ ಶನಿ ೧೫° ಲಾಭದಲ್ಲಿ, ಮಿಥುನರಾಶಿಯ ಚಂದ್ರನು ೧೨° ಇರುವ ಒಂದು ಜಾತಕವಿದೆ ಎಂದು ತಿಳಿಯಿರಿ. ಇಲ್ಲಿ ಗೋಚರಿಯಿಂದ ರವಿಯ ಪರಿಭ್ರಮಣವು ಪ್ರತಿ ವರ್ಷ ಸಿಂಹರಾಶಿಯಲ್ಲಿ ಹಾಗೂ ಕುಂಭರಾಶಿಯಲ್ಲಿ ಆಗುವಾಗ, ಅಂದರೆ ಅಗಸ್ಟ ೧೫ ರಿಂದ ಸಪ್ಟಂಬರ ೧೬ ಹಾಗೂ ಫೆಬ್ರುವರಿ ೧೨ ರಿಂದ ಮಾರ್ಚ ೧೫ ಈ ಅವಧಿಗಳು ಈ ಜಾತಕನಿಗೆ ಪ್ರತಿವರುಷ ಹಾನಿ ಯನ್ನುಂಟು ಮಾಡುತ್ತವೆ.

ಮಿಥುನನ ರಾಶಿಯು, ಸಿಂಹಸ್ಥ ಲಗ್ನದ ಸಿಂಹ ರವಿಯು ಬಂದಾಗ (ಪ್ರತಿವರ್ಷ) ಮೂರನೆಯ ರವಿಯೂ ಸಿಂಹರಾಶಿಯ ರವಿಯೂ, ಸಿಂಹ ಲಗ್ನದ ಮೇಲಿಂದ ಪರಿಭ್ರಮಿಸುವ ರವಿಯೂ ಇದ್ದುದರಿಂದ ಶುಭ ಫಲಗಳೇ ಹೆಚ್ಚಾಗಿ ಸಿಗಬೇಕಾಗಿತ್ತು. ಆದರೆ ಮೂಲ ಜಾತಕದಲ್ಲಿ ಸಿಂಹರಾಶಿಯ ಲಗ್ನದಲ್ಲಿ ಶನಿ ಇದ್ದ ಕಾರಣ, ಗೋಚರಿಯ ರವಿಯ ಪರಿಭ್ರಮಣವು ಮೂಲ ಶನಿಯ ಮೇಲಿಂದ ಆಗುತ್ತಿರುವದರಿಂದ, ಮೂರನೆಯ ರವಿಯಂತೆ ಶುಭ ಫಲಗಳು ದೊರೆಯದೇ, ಶನಿಯ ಮೇಲಿಂದ ರವಿಯ ಭ್ರಮಣವು ಅಶುಭ ಫಲವನ್ನು ಕೊಡುತ್ತದೆ. ಆದರೆ ಈ ಅಶುಭ ಫಲಗಳ ಅವಧಿಯು ಮೂಲ ಜಾತಕದಲ್ಲಿಯ ಶನಿಯು ಎಷ್ಟು ಅಂಶ ಇರುವನೋ, ಅದರ ಹಿಂದೆ ೩–೨೦°, ಮುಂದೆ ೩–೨೦° ವರೆಗೆ ಮಾತ್ರ ಅಶುಭ ಫಲಕೊಡುತ್ತದೆ. ಉದಾಹರಣೆಗೆ ಮೇಲಿನ ಜಾತಕವನ್ನೇ ತೆಗೆದುಕೊಳ್ಳಿರಿ. ಈ ಜಾತಕದಲ್ಲಿ ಶನಿಯು ೧೫° ಇದ್ದಾನೆ. ಗೋಚರಿಯಿಂದ ರವಿಯ ಪರಿಭ್ರಮಣವು ಸಿಂಹ ರಾಶಿಯಲ್ಲಿ ೧೧ ಅಂಶ ೪೦ ಕಲಾಬಂದಂದಿನಿಂದ ಹಿಡಿದು ೧೮ ಅಂಶ ೨೦ ಕಲಾ ಸಿಂಹ ರಾಶಿಯಲ್ಲಿ ದಾಟುವ ವರೆಗೆ ಮೂರನೇ ರವಿ ಇದ್ದರೂ ಕೂಡ, ಈ ಅವಧಿಗಳು ಮಾತ್ರ ಅಶುಭ ಫಲವನ್ನು ಕೊಡುತ್ತವೆ. ಇದರಂತೆಯೇ ಶನಿಯೊಂದಿಗೆ ಸ ಮ ಸ ಪ್ತ ಕ ರವಿಯ ಪರಿಭ್ರಮಣವು ಕೂಡ ಹಾನಿಯನ್ನುಂಟು ಮಾಡುತ್ತದೆ. ಕೆಲವೊಮ್ಮೆ ಮೂಲಗ್ರಹಗಳ ಮೇಲಿಂದ ಗೋಚರೀ ಗ್ರಹಗಳ ಪರಿಭ್ರಮಣವು ಇಲ್ಲವೇ ಸಮಸಪ್ತಕವು ಲಾಭವನ್ನುಂಟು ಮಾಡುತ್ತದೆ. ಉದಾಹರಣೆ: ಧನು ಲಗ್ನವಿದ್ದು, ಭಾಗ್ಯದಲ್ಲಿ ಸಿಂಹರಾಶಿಯ ಮಂಗಳನೂ ದಶಮದಲ್ಲಿ ಕನ್ಯಾ ರಾಶಿಯ ಚಂದ್ರನಿರುವ ಜಾತಕವಿದೆ ಎಂದು ತಿಳಿಯಿರಿ. ಇಲ್ಲಿ ಗುರುವು ಗೋಚರಿಯಿಂದ ಸಿಂಹರಾಶಿಗೆ ಬಂದಾಗ ಕನ್ಯಾರಾಶಿಯವರಿಗೆ ೧೧ನೇಯ ಗುರು ಆಗುವನು. ಧನು ಲಗ್ನದ ಭಾಗ್ಯದಲ್ಲಿ ಮಂಗಳನಿರುವ ಭಾಗ್ಯಸ್ಥಾನದ ಮೇಲಿಂದ ಗುರುವಿನ ಪರಿಭ್ರಮಣವು ಕನ್ಯಾರಾಸಿಯವರಿಗೆ ಹಾನಿಯನ್ನುಂಟು ಮಾಡದೇ ಲಾಭವನ್ನುಂಟು ಮಾಡುವನು. ಏಕೆಂದರೆ ಯೋಗಕಾರಕ ಗ್ರಹವಾದ ಮಂಗಳನ ಮೇಲಿಂದಲೂ ಭಾಗ್ಯ–ಸ್ಥಾನದ ಮೇಲಿಂದಲೂ ಗುರುವಿನ ಪರಿಭ್ರಮಣವು ಶುಭಕರವು. ಆದುದರಿಂದ

ಮೂಲ ಜಾತಕದಲ್ಲಿರುವ ಯಾವ ಯಾವ ಗ್ರಹಗಳ ಮೇಲಿಂದ ಗೋಚರೀ ಗ್ರಹಗಳ ಪರಿಭ್ರಮಣದ ಶುಭಾಶುಭ ಫಲಗಳನ್ನು ಈ ಕೆಳಗಿನಂತೆ ಕೊಡಲಾಗಿದೆ.

೧. **ರವಿ—ರವಿಯ ಗೋಚರಿಯ** ಭ್ರಮಣವು ಜಾತಕದಲ್ಲಿ ಮೂಲ ರವಿ, ಗುರು, ಮಂಗಳರ ಮೇಲಿಂದ ಆಗುವಾಗ ಶುಭ ಫಲಗಳನ್ನೂ, ಬುಧ-ಶುಕ್ರರ ಮೇಲಿಂದ ಆಗುವಾಗ ಶುಭಾಶುಭ ಮಿಶ್ರಿತ ಫಲವನ್ನೂ, ಚಂದ್ರ, ಶನಿ, ರಾಹು, ಕೇತುಗಳ ಮೇಲಿಂದ ರವಿಯ ಪರಿಭ್ರಮಣವು ಅಶುಭ ಫಲಗಳನ್ನೂ ಕೊಡುತ್ತದೆ.

೨. **ಮಂಗಳ—ಗೋಚರಿಯ** ಮಂಗಳನ ಪರಿಭ್ರಮಣವು ಮೂಲ ಜಾತಕದ ಮಂಗಳ, ಗುರು, ರವಿ, ರಾಹು ಇವುಗಳ ಮೇಲಿಂದ ಭ್ರಮಿಸುವಾಗ ಶುಭ ಫಲವನ್ನೂ, ಬುಧ, ಶುಕ್ರರ ಮೇಲಿಂದ ಭ್ರಮಿಸುವಾ ಶುಭಾಶುಭ ಮಿಶ್ರಿತ ಫಲಗಳನ್ನೂ, ಶನಿ, ಚಂದ್ರ, ಕೇತು ಇವುಗಳ ಮೇಲಿಂದ ಭ್ರಮಿಸುವಾಗ ಅಶುಭ ಫಲವನ್ನೂ ಕೊಡುವನು.

೩. **ಬುಧ—**ಬುಧನ ಪರಿಭ್ರಮಣವು ಬುಧ, ಶುಕ್ರ, ಚಂದ್ರ, ರವಿ, ಶನಿ, ಇವರ ಮೇಲಿಂದಾಗುವಾಗ ಶುಭ ಫಲವನ್ನೂ, ಗುರು, ರಾಹು, ಮಂಗಳ, ಕೇತು ಇವರ ಮೇಲಿಂದಾಗುವಾಗ ಅಶುಭ ಫಲವನ್ನೂ ಕೊಡುವನು.

೪. **ಗುರು—**ಗುರುವಿನ ಪರಿಭ್ರಮಣವು ಚಂದ್ರ, ಗುರು, ಮಂಗಳ, ರವಿ ಇವರ ಮೇಲಿಂದಾಗುವಾಗ ಶುಭ ಫಲವನ್ನೂ, ಬುಧ, ಶುಕ್ರ ಶನಿಯರ ಮೇಲಿಂದ ಆಗುವಾಗ ಅಶ ಫಲವನ್ನೂ ಕೊಡುವನು.

೫. **ಶುಕ್ರ—**ಶುಕ್ರನ ಪರಿಭ್ರಮಣವು ಶುಕ್ರ, ಬುಧ, ಶನಿ, ಚಂದ್ರ, ಇವರ ಮೇಲಿಂದಾಗುವ ಶುಭದಾಯಕವೂ, ಮಂಗಳ, ಗುರು, ರವಿ, ರಾಹು ಇವರ ಮೇಲಿಂದಾಗುವ ಭ್ರಮಣವು ಅಶುಭದಾಯಕವೂ ಆಗುತ್ತದೆ.

**ಚಂದ್ರ—**ಚಂದ್ರನ ಪರಿಭ್ರಮಣವು ಚಂದ್ರ, ಬುಧ, ಶುಕ್ರ, ಗುರು ಇವರ ಮೇಲಿಂದಾಗುವಾಗ ಶುಭಫಲವನ್ನೂ, ರವಿ, ಮಂಗಳ, ಶನಿ

ಇವರ ಮೇಲಿಂದಾಗುವಾಗ ಅಶುಭದಾಯಕ ಫಲವನ್ನೂ ಕೊಡುವದು.

ಶನಿ—ಶನಿಯ ಗೋಚರಿಯ ಪರಿಭ್ರಮಣದ ವಿಷಯವಾಗಿ ನಮ್ಮ ಸಾಡೇಸಾತಿ ಗ್ರಂಥದಲ್ಲಿ ವಿವರವಾಗಿ ವಿವೇಚಿಸಲಾಗಿದೆ.

## ಭಾವೇಶನ ಪರಿಭ್ರಮಣ

ಗೋಚರೀ ಗ್ರಹಗಳು ಜನ್ಮರಾಶಿಯಿಂದ ಶುಭಾಶುಭವಿದ್ದರೂ ಕೂಡ, ಯಾವದೊಂದು ರಾಶಿಯ ಎಲ್ಲ ಜನರಿಗೆ ಒಂದೇ ತರಹದ ಶುಭಾ-ಶುಭ ಫಲಗಳು ದೊರೆಯಲಾರವು. ಕೆಲವರಿಗೆ ಕೌಟುಂಬಿಕ ದೃಷ್ಟಿಯಿಂದ ಶುಭಾಶುಭ ಫಲಗಳು ದೊರೆತರೆ, ಇನ್ನು ಕೆಲವರಿಗೆ ಔದ್ಯೋಗಿಕ ದೃಷ್ಟಿಯಿಂದಲೂ, ಮತ್ತೆ ಕೆಲವರಿಗೆ ಆರ್ಥಿಕ, ಶಾರೀರಿಕ ದೃಷ್ಟಿಯಿಂದಲೂ ಶುಭಾಶುಭ ಫಲಗಳು ದೊರೆಯುತ್ತವೆ. ಈ ವಿಭಿನ್ನತೆಯ ಫಲಗಳ ಗುಟ್ಟೇನು ? ಇದಕ್ಕೆ ಉತ್ತರ ಜನ್ಮರಾಶಿಗಳು ಭಿನ್ನ ಭಿನ್ನವಾಗಿರುತ್ತವೆ ಎಂಬುದು. ಹಾಗಾದರೆ ಒಂದೇ ಜನ್ಮರಾಶಿ ಇದ್ದಲ್ಲಿ ಕೂಡ ಈ ಅಂತರವೇಕೆ ? ಉದಾಹರಣೆಗಾಗಿ ವೃಶ್ಚಿಕ ಲಗ್ನದ ವೃಷಭರಾಶಿಯ ಚಂದ್ರನಿರುವ ಒಂದು ಜಾತಕ, ತುಲಾ ಲಗ್ನ ವೃಷಭದಲ್ಲಿ ಚಂದ್ರನಿರುವ ಮತ್ತೊಂದು ಜಾತಕ-ಹೀಗೆ ಒಂದೇ ರಾಶಿಯ ೨ ಜಾತಕಗಳಿವೆ ಎಂದು ತಿಳಿಯಿರಿ. ಗೋಚರಿಯಿಂದ ರವಿಯು ತುಲಾರಾಶಿಗೆ ಬಂದಾಗ ಅಂದರೆ ಅಕ್ಟೋಬರ ೧೬ ರಿಂದ ನವ್ಹಂಬರ ೧೫ ರ ವರೆಗಿನ ಕಾಲವು ಸಾಮಾನ್ಯವಾಗಿ ವೃಷಭ ರಾಶಿಯವರಿಗೆ ಆರನೆಯ ರವಿ ಇದ್ದ ಕಾರಣ ಶುಭದಾಯಕ ಎಂದು ಹೇಳುತ್ತಿದರೂ ಕೂಡ, ಮೇಲೆ ತೋರಿಸಿದ ವೃಶ್ಚಿಕ ಲಗ್ನದ ವೃಷಭ ರಾಶಿಯವರಿಗೆ ೬ನೆಯ ರವಿಯು ಶುಭ ಫಲಕೊಡದೇ ಅಶುಭ ಫಲ ಕೊಡುತ್ತಾನೆ. ಕಾರಣ ದಶಮೇಶನ ಪರಿಭ್ರಮಣ ವ್ಯಯ ಸ್ಥಾನದಲ್ಲಿ, ಮೇಲೆ ನೀಚ ರಾಶಿಯಲ್ಲಿ ಎರಡನೆಯ ಜಾತಕದವನಿಗೆ ತುಲಾ ಲಗ್ನ ವೃಷಭ ರಾಶಿ ಇದ್ದ ಕಾರಣ, ೬ ನೆಯ ರವಿಯು ಶುಭದಾಯಕನಾಗುತ್ತಾನೆ. ಏಕೆಂದರೆ ಲಾಭೇಶನ ಪರಿಭ್ರಮಣವು ಲಗ್ನದ ಮೇಲೆ ಆಗುವದು. ಆದ್ದರಿಂದ ಒಂದೇ ರಾಶಿಯ ಎಲ್ಲ ಜನರಿಗೂ ಒಂದೇ ತರದ ಪರಿಣಾಮ

ವಾಗಲಿಲ್ಲದ್ದಕ್ಕೆ, ಆಯಾ ಸ್ಥಾನಗಳ ಭಾವೇಶರ ಪರಿಭ್ರಮಣವೇ ಕಾರಣ ವೆಂದು ಹೇಳಬಹುದು.

## ಸ್ಥಾನಗಳ ಮೇಲಿಂದ ಗ್ರಹಗಳ ಪರಿಭ್ರಮಣ

ಗೋಚರೀ ಗ್ರಹಗಳ ಪರಿಭ್ರಮಣದ ಕಾಲಕ್ಕೆ ಜನ್ಮರಾಶಿಯಿಂದ ಎಷ್ಟನೆಯವರಾದರೆ ಯಾವ ಫಲಗಳು ದೊರೆಯುತ್ತವೆ ? ಯಾವ ಗ್ರಹ ಗಳ ಮೇಲಿಂದ ಪರಿಭ್ರಮಣದ ಫಲ ? ಈ ಮುಂತಾದ ಸಂಗತಿಗಳು ಎಷ್ಟು ಮಹತ್ವದವೋ, ಅಷ್ಟೇ ಮಹತ್ವವು ಯಾವ ಸ್ಥಾನಗಳ ಮೇಲಿಂದ ಗ್ರಹ ಗಳ ಪರಿಭ್ರಮಣವಾಗುತ್ತದೆ ಎಂಬುದು ಇರುತ್ತದೆ. ಉದಾ— ಮಿಥುನ – ಲಗ್ನದ ಚಂದ್ರನು ಕುಂಭರಾಶಿ ಇರುವ ಜಾತಕವಿದ್ದು ಗೋಚರಿಯಿಂದ ಶುಕ್ರನ ಪರಿಭ್ರಮಣ ವೃಷಭ ರಾಶಿಯಲ್ಲಿ ಹಾಗೂ ಸಿಂಹ ರಾಶಿಯಲ್ಲಿ ಆಗುತ್ತಿರುವಾಗ ಕುಂಭ ರಾಶಿಯವರಿಗೆ ೪ ನೆಯ ಹಾಗೂ ೭ ನೆಯ ಶುಕ್ರನಾಗುವ ಕಾರಣ ಶುಭಫಲದಾಯಕ. ಆದರೆ ಶುಕ್ರನ ಪರಿಭ್ರಮಣ ವ್ಯಯ – ಸ್ಥಾನದ ಮೇಲಿಂದಾಗುವಾಗ ಹೆಚ್ಚು ಶುಭಫಲದಾಯಕ. ಇದಕ್ಕೆ ಕಾರಣ ಗೋಚರೀ ಶುಕ್ರನ ಪರಿಭ್ರಮಣ ವ್ಯಯ – ಸ್ಥಾನದ ಮೇಲಿಂದಾಗುವದು ತೃತೀಯ ಸ್ಥಾನದ ಮೇಲಿಂದಾಗುವ ಪರಿಭ್ರಮಣ ಕ್ಕಿಂತಲೂ ಹೆಚ್ಚು ಪೂರಕವಿರುತ್ತದೆ. ಇದಕ್ಕೆ ಕಾರಣ ಆಯಾ ಗ್ರಹ ಗಳ ಪರಿಭ್ರಮಣ ಆಯಾ ಸ್ಥಾನಗಳ ಮೇಲಿಂದ ಮಾತ್ರ ಶುಭ ದಾಯಕವೂ ಅಥವಾ ಅಶುಭ ದಾಯಕವೂ ಇರುತ್ತದೆ. ಯಾವ ಯಾವ ಗ್ರಹಗಳ ಗೋಚರೀ ಪರಿಭ್ರಮಣವು ಯಾವ ಯಾವ ಸ್ಥಾನಗಳಿಗೆ ಶುಭಾಶುಭವೆಂಬುದನ್ನು ಈ ಕೆಳಗೆ ಕೊಡಲಾಗಿದೆ.

**ತನು ಸ್ಥಾನ :—** ಗುರು, ಶುಕ್ರ, ಚಂದ್ರರ ಪರಿಭ್ರಮಣವು ತನು ಸ್ಥಾನದ ಮೇಲಿಂದಾಗುವಾಗ ಶುಭಫಲವನ್ನೂ, ರವಿ, ಬುಧರ ಪರಿ ಭ್ರಮಣವು ಮಧ್ಯಮ ಫಲವನ್ನೂ, ಮಂಗಳ, ರಾಹು, ಶನಿಗಳ ಪರಿಭ್ರಮಣವು ಅಶುಭ ಫಲವನ್ನೂ ಕೊಡುತ್ತವೆ.

ದ್ವಿತೀಯ ಸ್ಥಾನ: — ಬುಧ, ಶುಕ್ರ, ಚಂದ್ರ, ಗುರು, ಇವರ ಪರಿಭ್ರಮಣವು ಶುಭದಾಯಕವೂ ; ರವಿ, ಮಂಗಳ, ರಾಹು ಶನಿಗಳ ಪರಿಭ್ರಮಣವು ಅಶುಭದಾಯಕವೂ ಇರುತ್ತದೆ.

ತೃತೀಯ ಸ್ಥಾನ:— ರವಿ, ಮಂಗಳ, ರಾಹು ಇವರ ಪರಿಭ್ರಮಣವೂ ಶುಭದಾಯಕವೂ, ಶನಿ, ಬುಧ, ಗುರುಗಳ ಪರಿಭ್ರಮಣ ಮಧ್ಯಮದಾಯಕವೂ, ಚಂದ್ರ, ಶುಕ್ರರ ಪರಿಭ್ರಮಣವು ಅಶುಭ ದಾಯಕವೂ ಆಗುತ್ತದೆ.

ಚತುರ್ಥಸ್ಥಾನ: — ಗುರು, ಶುಕ್ರ, ಚಂದ್ರರ ಪರಿಭ್ರಮಣವು ಚತುರ್ಥಸ್ಥಾನದ ಮೇಲಿಂದಾಗುವದು ಶುಭದಾಯಕವೂ, ರವಿ, ಮಂಗಳ ಶನಿ, ರಾಹು, ಬುಧರ ಪರಿಭ್ರಮಣವು ಅಶುಭದಾಯಕವೂ ಆಗುತ್ತದೆ.

ಪಂಚಮ ಸ್ಥಾನ: — ಬುಧ, ಗುರು, ಶುಕ್ರ, ಚಂದ್ರರ ಪರಿಭ್ರಮಣವು ಶುಭದಾಯಕವೂ, ರವಿ, ಮಂಗಳ, ಶನಿ, ರಾಹುಗಳ ಪರಿಭ್ರಮಣ ಅಶುಭದಾಯಕವೂ ಇರುವದು.

ಷಷ್ಠ ಸ್ಥಾನ: — ಚಂದ್ರ, ಶುಕ್ರ, ಗುರುಗಳ ಪರಿಭ್ರಮಣವು ಅಶುಭದಾಯಕ. ರವಿ, ಮಂಗಳ, ಬುಧ, ರಾಹು, ಶನಿ ಇವರ ಪರಿಭ್ರಮಣ ಶುಭದಾಯಕ.

ಸಪ್ತಮ ಸ್ಥಾನ: — ಗುರು. ಶುಕ್ರ, ಚಂದ್ರರ ಪರಿಭ್ರಮಣವು ಶುಭದಾಯಕ; ರವಿ, ಮಂಗಳ, ಬುಧ, ಶನಿ ಅಶುಭದಾಯಕ.

ಅಷ್ಟಮ ಸ್ಥಾನ: — ಶನಿ, ಬುಧ, ರಾಹು ಇವರ ಪರಿಭ್ರಮಣವು ಶುಭದಾಯಕ, ಮಂಗಳ, ಚಂದ್ರ, ಶುಕ್ರ, ರವಿ, ಗುರು ಇವುಗಳ ಪರಿಭ್ರಮಣ ಅಶುಭದಾಯಕವೂ ಆಗುತ್ತದೆ.

ನವಮ, ದಶಮ, ಏಕಾದಶ ಸ್ಥಾನಗಳು: — ಈ ಮೂರೂ ಸ್ಥಾನಗಳ ಮೇಲಿಂದ ಎಲ್ಲ ಗ್ರಹಗಳ ಪರಿಭ್ರಮಣವು ಶುಭಾಶುಭ ಮಿಶ್ರಿತ ಇರುತ್ತವೆ.

ದ್ವಾದಶ ಸ್ಥಾನ: — ಶುಕ್ರನ ಪರಿಭ್ರಮಣ ದ್ವಾದಶ ಸ್ಥಾನದ ಮೇಲಿಂದ ಆಗುವದು ಶುಭದಾಯಕ, ಚಂದ್ರನದು ಅಶುಭದಾಯಕವು. ಉಳಿದ ಗ್ರಹಗಳ ಪರಿಭ್ರಮಣದ ಮಿಶ್ರಿತ ಫಲ ವಿರುತ್ತದೆ,

ಅಪವಾದ: — ಯೋಗಕಾರಕ ಗ್ರಹಗಳೂ, ರಾಶಿಯಿಂದ ಶುಭ ದಾಯಕವೂ ಜನ್ಮ ರಾಶಿಯಿಂದ ಸ್ವರಾಶಿಯಿಂದ ಇರುವ ಗ್ರಹಗಳ ಆಯಾ ಸ್ಥಾನಗಳ ಫಲಗಳ ಸ್ವರೂಪವೇ ಬೇರೆಯಾಗಿರುತ್ತದೆ.

ಗ್ರಹಾವಸ್ಥೆ: — ರವ್ಯಾದಿ ಗೋಚರೀ ಗ್ರಹಗಳ ಸ್ಥಾನಾಂತರ, ರಾಶ್ಯಾಂತರಗಳ ಮೇಲಿಂದ ರಾಶಿಭವಿಷ್ಯವನ್ನು ವರ್ತಿಸುವ ಪೂರ್ವ ದಲ್ಲಿ ಗ್ರಹಗಳ ಅವಸ್ಥೆಯನ್ನು ಪರಿಶೀಲಿಸುವದು ಅತ್ಯಂತ ಮಹತ್ವ ದ್ದಿರುತ್ತದೆ.

ಗ್ರಹ—ಗ್ರಹಗಳ ಯುತಿ, ಉದಯಾಸ್ತ, ಗ್ರಹಗಳ ವಕ್ರೀ; ಮಾರ್ಗಿ ವೊದಲಾದ ಅಂಶಗಳನ್ನೂ ಗಣನೆಗೆ ತಂದು, ಗೋಚರೀ ಗ್ರಹಗಳ ಫಲ ಗಳನ್ನು ವರ್ತಿಸುವದರಲ್ಲಿ ಸೂಕ್ಷ್ಮಾ-ಸೂಕ್ಷ್ಮ ಸಂಗತಿಗಳು ತಿಳಿಯುವದಕ್ಕೆ ಸಹಾಯಕವಾಗುವದು.

### ಗ್ರಹಯೋಗ ಹಾಗೂ ಗ್ರಹಯುತಿಗಳು

ಗೋಚರೀ ಗ್ರಹಗಳ ನಿಯಮಿತ ಪರಿಭ್ರಮಣದ ಕಾಲಕ್ಕೆ ಅಂಶಾತ್ಮಕವಾಗಿ ಒಂದೊಂದರ ಸಂಯೋಗದ ಕಾಲಕ್ಕೆ ಗ್ರಹಗಳ ಯುತಿಯಾಗುವದು. ಈ ಯುತಿಗ್ರಹಗಳ ಫಲಗಳು ಸ್ವತಂತ್ರ ಗ್ರಹಗಳ ಫಲಕ್ಕಿಂತ ಭಿನ್ನವಾಗಿರುತ್ತವೆ.

ಯಾವುದೊಂದು ರಾಶಿಯಲ್ಲಿ ಒಂದಕ್ಕಿಂತ ಹೆಚ್ಚು ಗ್ರಹಗಳ ರಾಶ್ಯಾಂತರ ಇಲ್ಲವೇ ಸಂಯೋಗಗಳು ಗ್ರಹಯೋಗಗಳನ್ನುಂಟು ಮಾಡುತ್ತವೆ. ಇಂಥ ಯೋಗಗಳಲ್ಲಿ ಸಾಮಾನ್ಯವಾಗಿ ೮ ಪ್ರಕಾರಗಳು. ದ್ವಿಗ್ರಹಯೋಗ, ತ್ರಿಗ್ರಹಯೋಗ, ಚತುರ್ಗ್ರಹಯೋಗ; ಪಂಚಗ್ರಹ ಯೋಗ; ಷಷ್ಠಗ್ರಹಯೋಗ ಸಪ್ತಗ್ರಹ; ಅಷ್ಟಗ್ರಹಯೋಗಗಳು.

೧೯೬೨ ರಲ್ಲಿ ನಾವು ನಮ್ಮ ಜ್ಯೋತಿರ್ವಾಣಿ ಪ್ರತಿಕೆಯಲ್ಲಿ ಪ್ರಕಟಿಸಿದಂತೆ, ೧೯೬೨ರ ವರೆಗೆ ಕಳೆದ ೧೮೦ ವರ್ಷಗಳಲ್ಲಿ ೧೪೦ ಪಂಚ ಗ್ರಹ ಯೋಗಗಳೂ, ೧೩ ಷಷ್ಟ ಗ್ರಹ ಯೋಗಗಳು, ೩ ಸಪ್ತಗ್ರಹ ಯೋಗಗಳೂ, ೧ ಅಷ್ಟಗ್ರಹ ಯೋಗವೂ ಆದದ್ದು ಕಂಡು ಬರುತ್ತದೆ.

ರಸಾಯನ ಶಾಸ್ತ್ರದ ತತ್ವದ ಮೇರೆಗೆ ಯಾವದೇ ಎರಡು ಪದಾರ್ಥಗಳ ಸಂಯೋಗದಿಂದ ಹೊಸ ಪಧಾರ್ಥವು ಇಲ್ಲವೇ ಪದಾರ್ಥಗಳು ಹುಟ್ಟುತ್ತವೆ. ಆ ಪದಾರ್ಥಗಳು ತಮ್ಮ ಗುಣಧರ್ಮವನ್ನು ಕಳೆದುಕೊಳ್ಳುತ್ತವೆ. $(Zn + H_2So_4 = ZnSo_4 + H_2)$ ಹಾಗೆಯೇ ಜ್ಯೋತಿಷ್ಯ ವಿಜ್ಞಾನದ ಮೇರೆಗೆ ಎರಡು ಅಥವಾ ಹೆಚ್ಚು ಗ್ರಹಗಳ ಯೋಗದಿಂದ ಭಿನ್ನ ಭಿನ್ನ ಪರಿಣಾಮವಾಗುತ್ತದೆ. ಉದಾಹರಣೆಗೆ ರವಿ-ಶನಿಯರ ಇಲ್ಲವೇ ಶನಿ-ಮಂಗಳರ ಯೋಗ ; ಯುತಿ, ಪ್ರತಿಯೋಗಗಳು ಹೆಚ್ಚಿನ ಹಾನಿಯನ್ನುಂಟು ಮಾಡುತ್ತವೆ. ಅದರಲ್ಲಿಯೂ ಜನ್ಮರಾಶಿಯಿಂದ ಈ ಗ್ರಹಗಳು ಅಶುಭ ವಿದ್ದರಂತೂ ಹಾನಿಯ ಪ್ರಮಾಣ ಹೆಚ್ಚಿಗೆ ಇರುತ್ತದೆ.

**ಉದಯಾಸ್ತಗಳು :—** ಗೋಚರೀ ಗ್ರಹಗಳ ರಾಶ್ಯಾಂತರದ ಫಲಗಳಲ್ಲಿ ಗ್ರಹಗಳ ಉದಯಾಸ್ತಗಳೂ ಸಹ ಫಲವರ್ತಿಸುವದರಲ್ಲಿ ವಿಭಿನ್ನತೆ ಕೊಡುತ್ತವೆ. ಉದಾ:— ಯಾರೊಬ್ಬನಿಗೆ ಗೋಚರಿಯಿಂದ ಅಷ್ಟಮ ಗುರು ಇದ್ದಾನೆಂದು ತಿಳಿಯಿರಿ. ಅಷ್ಟಮ ಗುರುವಿನ ಫಲಗಳು ಅಶುಭವಿರುವವು. ಆದರೆ ಅದೇ ಗುರುವು ಅಸ್ತನಾಗಿದ್ದರೆ ಅಷ್ಟಮ ಗುರುವಿನ ಅನಿಷ್ಟ ಫಲಗಳ ಪ್ರಖರತೆಯು ಕಡಿಮೆಯಾಗುವದು.

ಇದರಂತೆಯೆ ಯಾವುದೊಂದು ಗ್ರಹವು ಗೋಚರಿಯಿಂದ ಶುಭವಿದ್ದಾಗೂ, ಶುಭಫಲಗಳನ್ನು ಕೊಡುತ್ತಿದ್ದರೂ ಅಸ್ತವಿರುವ ಸಮಯದಲ್ಲಿ ಸಂಪೂರ್ಣ ಶುಭ ಫಲ ದೊರೆಯಲಾರದು. ಉದಾಹರಣೆಗೆ ಯಾರೊಬ್ಬರಿಗೆ ಗೋಚರಿಯಿಂದ ೧೧ನೆಯ ಗುರುವಿದ್ದಾನೆಂದು ತಿಳಿದರೆ ೧೧ನೆಯ ಗುರುವಿನ ಶುಭ ಫಲಗಳು ಅಸ್ತವಿದ್ದ ಸಮಯದಲ್ಲಿ ಸಂಪೂರ್ಣ ದೊರೆಯಲಾರವು.

**ವಕ್ರೀ ಮತ್ತು ಮಾರ್ಗೀ :—** ಫಲಜ್ಯೋತಿಷ್ಯದಲ್ಲಿ ಗ್ರಹಗಳ ವಕ್ರೀ ಮತ್ತು ಮಾರ್ಗಿತ್ವವು ಅತ್ಯಂತ ಹೆಚ್ಚಿನ ಪರಿಣಾಮವನ್ನುಂಟು ಮಾಡುತ್ತವೆ. ಉದಾಹರಣೆಗೆ ಯಾರೊಬ್ಬನಿಗೆ ಯಾವುದೊಂದು ಗ್ರಹ ಗೋಚರಿಯಿಂದ ಶುಭ ವಿದ್ದ ಕಾಲದಲ್ಲಿ ಮಾರ್ಗಿ ಇದ್ದರೆ ಹೆಚ್ಚು ಶುಭ ಫಲವು, ವಕ್ರೀ ಇದ್ದರೆ ಶುಭ ಫಲದ ಪ್ರಮಾಣವು ಕಡಿಮೆಯಾಗಿಯೂ ಆಗುತ್ತದೆ.

ಇದರಂತೆಯೇ ಗೋಚರಿಯಿಂದ ಅಶುಭವಿದ್ದು ವಕ್ರೀಯಾದಲ್ಲಿ ಅಶುಭ ತ್ವವು ಕಡಿಮೆಯಾಗುವದು. ಮಾರ್ಗಿ ಇದ್ದು, ಅಶುಭನಿದ್ದಲ್ಲಿ ಅಶುಭತ್ವವು ಹೆಚ್ಚು ಆಗುವದು.

ಇನ್ನು ಮೂಲ ಜಾತಕದ ಮೇಲಿಂದ ಅಶುಭ ಮಾರ್ಗಿಗಳ ಫಲಗಳಲ್ಲಿ ಯಂತೂ ಅಸಮಾನ ಅಂತರ ಬರುತ್ತದೆ. ಉದಾಹರಣೆಗಾಗಿ ವೃಷಭ ಲಗ್ನ, ಮೀನದಲ್ಲಿ ಚಂದ್ರನಿರುವ ಒಂದು ಜಾತಕವಿದೆ ಎಂದು ತಿಳಿಯಿರಿ. ಗೋಚರಿ ಯಿಂದ ಶನಿಯು ವೃಷಭರಾಶಿಯಲ್ಲಿ ಬಂದಾಗ್ಗೆ ವೃಷಭ ಲಗ್ನದ ಮೀನರಾಶಿ ಯವರಿಗೆ ಗೋಚರಿಯಿಂದ ೩ನೆಯ ಶನಿಯಾಗುವದರಿಂದಲೂ, ವೃಷಭ ಲಗ್ನದ ಯೋಗಕಾರಕ ಗ್ರಹಗಳೊಳ್ಳೊಂದಾದ (ಭಾಗೇಶ ಹಾಗೂ ದಶಮೇಶ) ಶನಿಯ ಪರಿಭ್ರಮಣವು ಲಗ್ನದ ಮೇಲಿಂದಾಗುತ್ತಿರುವದು ಶುಭ ಫಲವನ್ನುಂಟು ಮಾಡುವದು. ಅದೇ ಶನಿಯು ಗೋಚರಿಯಿಂದ ಮಾರ್ಗಿ ಇದ್ದಲ್ಲಿ, ಶುಭ ಫಲಗಳಲ್ಲಿ ಹೆಚ್ಚಿನ ಪ್ರಮಾಣವನ್ನು ಕೊಡುತ್ತಾನೆ. ಇದರಂತೆಯೇ ಇನ್ನೊಂದು ಉದಾಹರಣೆಯನ್ನು ತೆಗೆದುಕೊಳ್ಳಿರಿ. ತುಲಾಲಗ್ನದ ಮಕರರಾಶಿಯ ಚಂದ್ರ ನಿರುವ ಒಂದು ಜಾತಕವಿದೆ ಎಂದು ತಿಳಿಯಿರಿ. ಇಲ್ಲಿ ಗೋಚರಿಯ ಶನಿಯ ಪರಿಭ್ರಮಣವು ವೃಶ್ಚಿಕ ರಾಶಿಯಲ್ಲಿದ್ದಾಗ ೧೧ನೆಯ ಶನಿಯು ಶುಭ ಫಲವನ್ನು ಕೊಡುವನು. ಆದರೆ ಅದೇ ಶನಿಯು ವಕ್ರಿ ಇದ್ದಾಗ ಮಾತ್ರ ಹೆಚ್ಚು ಶುಭ ಫಲವನ್ನು, ಮಾರ್ಗಿ ಇದ್ದಾಗ ಕಡಿಮೆ ಶುಭ ಫಲವನ್ನು ಕೊಡುವನು.

ಗ್ರಹಗಳು ಉಚ್ಚ ಇಲ್ಲವೇ ಸ್ವಗ್ರಹ ರಾಶಿಯಿಂದ ನೀಚ ರಾಶಿಯ ಕಡೆಗೆ, ಇಲ್ಲವೇ ಶತ್ರುಗ್ರಹ ರಾಶಿಯ ಕಡೆಗೆ ಗೋಚರಿಯಿಂದ ವಕ್ರಗತವಾಗಿ ಚಲಿಸು ವಾಗ ಅಶುಭ ಫಲಗಳನ್ನೂ, ನೀಚ ರಾಶಿಯಿಂದ ಇಲ್ಲವೇ ಶತ್ರುಗ್ರಹ ರಾಶಿ

ಯಿಂದ ಉಚ್ಚ, ಇಲ್ಲವೇ ಸ್ವಗ್ರಹ ರಾಶಿಯ ಕಡೆಗೆ ಮಾರ್ಗಿಯಾಗಿ ಚಲಿಸುವಾಗ ಶುಭ ಫಲಗಳನ್ನೂ ಹೆಚ್ಚಾಗಿ ಕೊಡುವವು.

ಒಮ್ಮೊಮ್ಮೆ ಜಾತಕದ ಮೇಲಿಂದ, ಜಾತಕದ ವಿಭಿನ್ನತೆಯಿಂದ ಫಲಗಳಲ್ಲಿಯೂ ಅಂತರವಾಗುವದು. ಒಟ್ಟಿನಲ್ಲಿ ಕೇವಲ ಜನ್ಮರಾಶಿಯಿಂದ ಗೋಚರೀ ಗ್ರಹಗಳ ಶುಭಾಶುಭಗಳನ್ನು ನಿರ್ಣಯಿಸುವಾಗ ವಕ್ರಿ, ಮಾರ್ಗಿಗಳಲ್ಲಿಯೂ ಹೆಚ್ಚಿನ ಪರಿಣಾಮವಾಗುವುದರಲ್ಲಿ ಸಂದೇಹವಿಲ್ಲ.

## ದಶಾಪದ್ಧತಿಯಿಂದ ಗ್ರಹಗತಿಯ ವಿಚಾರ

ಯಾವದೊಂದು ಜಾತಕಕ್ಕೆ ಯೋಗಕಾರಕ ಗ್ರಹಗಳೆಂದು ಬೇರೆ ಬೇರೆ ಇರುತ್ತವೆ. ಈ ಯೋಗಕಾರಕ ಗ್ರಹಗಳು ಬಲಾಢ್ಯರಿದ್ದು (ಮೂಲ ಜಾತಕದಲ್ಲಿ) ಅವುಗಳ ಮಹದರ್ಶೆ, ಅಂತರ್ದಶೆಗಳು ನಡೆಯುತ್ತಿದ್ದರೆ, ಗೋಚರೀ ಗ್ರಹಗಳು ಎಷ್ಟೇ ಅಶುಭವಿದ್ದರೂ ಅಶುಭ ಫಲವನ್ನು ಕೊಡಲಾರವು. ಉದಾ :— ವೃಷಭ ಲಗ್ನವನ್ನೇ ತೆಗೆದುಕೊಳ್ಳಿ. ಈ ಲಗ್ನಕ್ಕೆ ಶನಿ, ಬುಧ ರವಿಯರು ಯೋಗಕಾರಕರು. ಈ ಶನಿ, ಬುಧ, ರವಿಯರು ಮೂಲಜಾತಕದಲ್ಲಿ ಬಲಾಢ್ಯರಿದ್ದು ಅವರದೇ ಮಹದರ್ಶೆ ನಡೆಯುತ್ತಿರುವಾಗ, ಗೋಚರಿಯಿಂದ ಯಾವದೇ ಗ್ರಹಗಳು ಅಶುಭರಿದ್ದಾಗ್ಯೂ ಅಶುಭ ಫಲ ಕೊಡಲಾರರು. ಎರಡನೆಯದಾಗಿ ಮೂಲಜಾತಕದಲ್ಲಿ ಯೋಗಕಾರಕ ಗ್ರಹಗಳು ಬಲಾಢ್ಯರಿದ್ದು, ಅವರದೇ ದಶೆ ನಡೆಯುತ್ತಿದ್ದಾಗ ಆಯಾ ಗ್ರಹಗಳ ಭಾವಕ್ಕೆ ಆಗತಕ್ಕಂಥ ಹಾನಿಯೂ ಕೂಡ ಆಗಲಾರದು. ಉದಾ :— ವೃಷಭ ಲಗ್ನ ಕನ್ಯಾರಾಶಿಯಲ್ಲಿ ಬುಧನಿದ್ದು (ಬಲಾಢ್ಯ) ಬುಧನದೇ ಮಹಾದಶೆ ನಡೆಯುತ್ತಿದ್ದಾಗ, ಗೋಚರಿಯಿಂದ ಯಾವ ಗ್ರಹಗಳು ಅಶುಭರಿದ್ದಾಗ್ಯೂ ಪಂಚಮ ಹಾಗೂ ದ್ವಿತೀಯ ಭಾವಗಳ ಫಲಗಳಲ್ಲಿ ಹಾನಿಯಾಗಲಾರದು.



# ವೃತ್ತ ಪತ್ರಿಕೆಗಳಲ್ಲಿಯ ಭವಿಷ್ಯದ ವಿಭಿನ್ನತೆ

ಬೇರೆ ಬೇರೆ ವೃತ್ತಪತ್ರಿಕೆಗಳಲ್ಲಿ ಒಂದೇ ರಾಶಿಯ ಮೇಲಿನ ನಿಯತಕಾಲಿಕ ಭವಿಷ್ಯ - ಸೂಚನೆಗಳಲ್ಲಿ ವಿಭಿನ್ನತೆಯ ಕಾರಣ, ತಾಂತ್ರಿಕ ಹಾಗೂ ಶಾಸ್ತ್ರೀಯ ಅರ್ಥವಿವರಣೆಗಳಲ್ಲಿಯ ವಿಭಿನ್ನತೆ. ಪತ್ರಿಕೋದ್ಯೋಗಿಗಳು ಈ ವಿಭಿನ್ನತೆಗೆ ಹೇಗೆ ಹೊಣೆಗಾರರು ? ಈ ಮೊದಲಾದ ಸಂಗತಿಗಳನ್ನು ಈ ಪ್ರಕರಣದಲ್ಲಿ ವಿವರಿಸಲಾಗಿದೆ.

ಬೇರೆ ಬೇರೆ ಪತ್ರಿಕೆಗಳಲ್ಲಿ ಒಂದೇ ರಾಶಿಯ ಮೇಲಿನ ಭವಿಷ್ಯ-ಸೂಚನೆಗಳು ಬೇರೆ ಬೇರೆಯಾಗುವದರಲ್ಲಿ ಪ್ರಾಮುಖ್ಯವಾಗಿ ಎರಡು ಕಾರಣಗಳಿವೆ.

(೧) ಗೋಚರೀ ಗ್ರಹಗಳ ಪರಿಭ್ರಮಣದಿಂದಾಗುವ ಫಲಗಳಿಗೆ ಅರ್ಥಾನ್ವಯ ಮಾಡುವದರಲ್ಲಿ ವಿಭಿನ್ನತೆ.

(೨) ಪತ್ರಿಕೋದ್ಯಮಿಗಳು

ಮೊದಲನೆಯದಾಗಿ ಗೋಚರೀ ಗ್ರಹಗಳ ಪರಿಭ್ರಮಣದಿಂದಾಗುವ ಫಲಗಳಿಗೆ ಅರ್ಥಾನ್ವಯ ಮಾಡುವದರಲ್ಲಿ ವಿಭಿನ್ನತೆ ಹೇಗಾಗುವದೆಂಬುದನ್ನು ವಿವೇಚಿಸುವಾ.

ಯಾವುದೊಂದು ರಾಶಿಯ ಯಾರೊಬ್ಬರಿಗೆ, ಯಾವುದೊಂದು ವಾರದ ಅಥವಾ ತಿಂಗಳ ಗ್ರಹಗತಿಯಲ್ಲಿ ವ್ಯತ್ಯಾಸವಿರುವುದನ್ನು ಕಾಣುವೆವು. ಉದಾ:— ಯಾರೊಬ್ಬರಿಗೆ ಯಾವುದೊಂದು ನಿಯತ ಕಾಲಿಕ ಅವಧಿಯಲ್ಲಿ ಈ ಕೆಳಗಿನಂತೆ ಗ್ರಹಮಾನಗಳಿರುತ್ತವೆ ಎಂದು ತಿಳಿಯಿರಿ.

೧) ರವಿಯು ಇಡೀ ತಿಂಗಳು ಶುಭನು.

೨) ಚಂದ್ರನು ಶುಭಾಶುಭ ಮಿಶ್ರಿತನು.

೩) ಮಂಗಳನು ವಾರದ ಪ್ರಾರಂಭದಲ್ಲಿ ಶುಭನೂ ಮಾಸಾಂತ್ಯದಲ್ಲಿ ಅಶುಭನು.

೪) ಬುಧನು ಮಾಸದ ಮಧ್ಯದಲ್ಲಿ ಮಾತ್ರ ಶುಭನು.

೫) ಗುರುವು ಇಡೀ ಮಾಸ ಶುಭನು.

೬) ಶುಕ್ರನು ಪ್ರಾರಂಭದಲ್ಲಿ ಅಶುಭನೂ ಅಂತ್ಯದಲ್ಲಿ ಶುಭನೂ ಇರುವನು.

೭) ಶನಿಯು ಇಡೀ ತಿಂಗಳು ಅಶುಭನು.

ಹೀಗೆ ಯಾರೊಬ್ಬ ವ್ಯಕ್ತಿಯು ಗ್ರಹಮಾನವಿರುತ್ತದೆಂದು ತಿಳಿದರೆ, ಒಬ್ಬ ಜ್ಯೋತಿಷಿಯು ರವಿಯ ಮೇಲಿಂದ ರಾಶಿಭವಿಷ್ಯದಲ್ಲಿ ಕೇವಲ ಶುಭ ಫಲಗಳನ್ನೇ ಬರೆದರೆ, ಮತ್ತೊಬ್ಬ ಜ್ಯೋತಿಷಿಯು ಮಂಗಳನ ಮೇಲಿಂದ ಕೇವಲ ಅಶುಭ ಫಲಗಳನ್ನೇ ಮಾತ್ರ ಬರೆಯುವನು. ಇನ್ನೊಬ್ಬ ಜ್ಯೋತಿಷಿಯು ಶುಭಾಶುಭ ಮಿಶ್ರಿತ ಫಲವನ್ನು ಬರೆದರೆ, ಮುಗದೊಬ್ಬ ಜ್ಯೋತಿಷಿಯು ಶುಭಾಶುಭ ಫಲಗಳನ್ನು ಕೂಡ ತಾರತಮ್ಯ ಭಾವದಿಂದಾಗಲೀ, ಗುಣಾವಗುಣಗಳ ವೀಕ್ಷಣೆಯಿಂದಾಗಲೀ ಅನೇಕ ಅರ್ಥಗಳನ್ನು ಹಚ್ಚಿ ಬರೆಯುವನು. ಇದಲ್ಲದೇ ಆಯಾ ಗ್ರಹಗಳಿಗೆ ಪ್ರಾಧಾನ್ಯತೆಗಳನ್ನು ಕೊಟ್ಟು, ಅವರವರ ಅನುಭವವನ್ನು ಕೊಡುವದ ರಿಂದ ಭಿನ್ನ ಭಿನ್ನ ಪತ್ರಿಕೆಗಳಲ್ಲಿ ಭಿನ್ನ ಭಿನ್ನ ವಿಷಯಗಳು ಬರುವದು ಸ್ವಾಭಾವಿಕ.

ಎರಡನೆಯದಾಗಿ ಆಯಾ ಗ್ರಹಗಳು ಶುಭಾ–ಶುಭ ಫಲಗಳಿಗೆ ಅರ್ಥಾನ್ವಯ ಮಾಡುವದರಲ್ಲಿಯೂ ವಿಭಿನ್ನತೆ ಇರಲೂ ಕಾರಣವಿದೆ. ಉದಾಹರಣೆಗೆ ಯಾವದೊಂದು ರಾಶಿಯ ವ್ಯಕ್ತಿಗೆ ರವಿಯು ಗೋಚರಿ ಯಿಂದ ಜನ್ಮಸ್ಥನಿರುವನೆಂದು ತಿಳಿಯಿರಿ. ರವಿಯು ಜನ್ಮಸ್ಥನಿದ್ದರೆ ಪ್ರವಾಸ, ಶಾರೀರಿಕ ಪೀಡೆ, ಅಸ್ವಸ್ಥತೆ, ಬದಲಿ, ಮುಂತಾದ ಸಂಗತಿಗಳು ಸಂಭವಿಸುವವು. ಆದರೆ ಈ ಜನ್ಮಸ್ಥ ರವಿಯ ಗೋಚರಿಯ ಫಲವನ್ನು ಬರೆಯುವಾಗ ಪತ್ರಿಕೆಯಲ್ಲಿ ಬರೆಯುವ ಒಬ್ಬ ಜ್ಯೋತಿಷಿಯು ಪ್ರಕೃತಿ ಕೆಡುವದು ಎಂದು ಬರೆದರೆ, ಇನ್ನೊಬ್ಬನು ಪ್ರವಾಸ ಹೋಗಬಹುದೆ ಎಂದು ಬರೆಯುವನು. ಇನ್ನೊಬ್ಬನು ನೌಕರಿ ವರ್ಗದವರಿಗೆ ಬದಲಿ ಎಂದು ಬರೆದರೆ, ಮುಗದೊಬ್ಬನು ಅದನ್ನೇ ಅತಿ ರಂಜಕವಾಗಿ ತೀರ್ಥಯಾತ್ರಾ–

ಯೋಗವೆಂತಲೂ, ಪರದೇಶ ಗಮನ, ದೂರದ ಪ್ರವಾಸ ಎಂತಲೂ, ನೌಕರಿ-ವರ್ಗದವರಿಗೆ ಇಂಟರ ಯ್ವ್ಹ್ಯೂ ಎಂತಲೂ ಬರೆಯಬಹುದು. ಇದರಂತೆಯೇ ಎಲ್ಲ ಗ್ರಹಗಳ ಗೋಚರೀ ಫಲಗಳಲ್ಲಿ ಅರ್ಥಾನ್ವಯ ಮಾಡುವದರಲ್ಲಿ ವಿಭಿನ್ನತೆ ಕಂಡು ಬಂದರೂ ಯಾರೂ ಸತ್ಯಕ್ಕೆ ದೂರ ಇರುವದಿಲ್ಲ.

ಮೂರನೆಯದಾಗಿ ಯಾವುದೊಂದು ಗೋಚರೀ ಗ್ರಹದ ಗತಿಯ ಫಲಗಳ ಅರ್ಥಾನ್ವಯ (Interpretation) ವಿವರಣೆ, ವಾಖ್ಯೆ, ಹೊಂದಾಣಿಕೆ (ಅನ್ವಯ) (Applicability) ಮಾಡುವದರಲ್ಲಿ, ಬಳಸುವ ಶಬ್ದಗಳೂ ವಿಭಿನ್ನತೆಗೆ ಕಾರಣೀಭೂತಗಳಾಗುವವು ಎಂಬು ದರಲ್ಲಿ ಸಂಶಯವಿಲ್ಲ. ಯಾರೊಬ್ಬರಿಗೆ ಯಾವದೊಂದು ನಿಯತ ಕಾಲಿಕ ಅವಧಿಯಲ್ಲಿ ಯಾವದೊಂದು ಗ್ರಹ ವೈವಾಹಿಕ ಜೀವನದ ದೃಷ್ಟಿಯಿಂದ ಅಶುಭವಿದೆ ಎಂದು ತಿಳಿಯಿರಿ. ಇದನ್ನೇ ಪತ್ರಿಕೆಗಳಲ್ಲಿ ಬರೆಯುವ ಜ್ಯೋತಿಷಿಗಳು ಬಳಸುವ ಶಬ್ದಗಳಲ್ಲಿ ವಿಭಿನ್ನತೆ ಕಂಡು ಬಂದರೂ, ಯಾರೂ ವಿರುದ್ಧ ಅರ್ಥಗಳನ್ನು ಬರೆಯಲಾರರು. ಉದಾ:—ಗ್ರಹ-ಕಲಹ, ಕೌಟುಂಬಿಕ ವಿರಸ, ಮನಸ್ತಾಪ, ವಿವಾಹಿತ ಸ್ತ್ರೀ-ಪುರುಷರಲ್ಲಿ ಭಿನ್ನಾಭಿಪ್ರಾಯ, ಘಟಸ್ಫೋಟ, ವಿವಾಹಿತ ಸ್ತ್ರೀಪುರುಷರಲ್ಲಿ ವಿರಹ, ವ್ಯಾಜ್ಯ, ಈ ಮುಂತಾಗಿ ಬಳಸುವ ಶಬ್ದಗಳ ಮತಿತಾರ್ಥ "ವೈವಾಹಿಕ ಜೀವನಕ್ಕೆ ತೊಂದರೆ" ಎಂಬ ಸಾಮಾನ್ಯ ಅರ್ಥವಾಗುತ್ತಿದ್ದರೂ, ಪ್ರತಿಯೊಂದು ಶಬ್ದಕ್ಕೂ ವೈಶಿಷ್ಟ್ಯ ಪೂರ್ಣ ಅರ್ಥವಿದೆ. ಇದನ್ನೇ ಬೇರೆ ಬೇರೆ ಜ್ಯೋತಿಷಿಗಳು ತಮ್ಮ-ತಮ್ಮದೇ ಆದ ವೈಶಿಷ್ಟ್ಯ ಪೂರ್ಣ ಅನುಭವಗಳಿಂದ ವಿಶಿಷ್ಟವಾದ ಶಬ್ದಗಳನ್ನು ಬಳಸುವದರಲ್ಲಿ ಸಹ ಔಚಿತ್ಯವಿದೆ.

ನಾಲ್ಕನೆಯದಾಗಿ ಯಾವುದೊಂದು ಗ್ರಹ ಶುಭಾಶುಭವಿದ್ದರೂ ಫಲಾನ್ವಯ ಮಾಡುದದರಲ್ಲಿಯೂ ಕೂಡ ಅನೇಕ ತೊಂದರೆಗಳಿವೆ. ಶನಿಯು ಗೋಚರಿಯಿಂದ ಯಾರ್ರೊಬ್ಬರಿಗೆ ಯಾವದೊಂದು ನಿಯತ ಕಾಲಿಕ ಅವಧಿಯಲ್ಲಿ ಶುಭನಾಗಿ ಬಂದರೆ, ಅನೇಕ ವರ್ಗದವರಿಗೆ ಅನೇಕ ರೀತಿಯಿಂದ ಫಲಗಳನ್ನು ಕೊಡುತ್ತಿದ್ದರೂ, ಎಲ್ಲರಿಗೂ ಅನ್ವಯಿಸುವಂತೆ

ಫಲಗಳನ್ನು ಬರೆಯುವದು ದುಸ್ತರವಾದ ಮಾತಾಗಿರುತ್ತದೆ. ಉದಾಹರಣೆಗಾಗಿ ಶನಿಯು ಗೋಚರಿಯಿಂದ ಅನುಕೂಲನಿದ್ದರೆ ಎಣ್ಣೆಯ ವ್ಯಾಪಾರಸ್ಥರಿಗೂ, ಕಾರಖಾನೆಯ ಮಾಲಕರಿಗೂ, ಶ್ರಮಜೀವಿಗಳಿಗೂ, ಕೃಷೀವರ್ಗದವರಿಗೂ, ವಕೀಲರಿಗೂ, ಕೈಗಾರಿಕಾಕೆಲಸಗಾರರಿಗೂ ಯಂತ್ರ ಸಾಮಾಗ್ರಿಗಳ ಉತ್ಪಾದಕರಿಗೂ, ಫಾರ್ಮಸಿಯ ಕೆಲಸಗಾರರಿಗೂ ಶುಭಫಲವನ್ನು ಕೊಡುತಾನೆಂದು ತಿಳಿಯಿರಿ. ಇಲ್ಲಿ ವೃತ್ತಪತ್ರಿಕೆಗಳಲ್ಲಿಯ ಭವಿಷ್ಯಗಾರರೆಲ್ಲರೂ ಎಲ್ಲ ವರ್ಗದವರಿಗೂ ಅನ್ವಯಿಸುವಂತೆ ಬರೆಯುವದರಲ್ಲಿ ಪತ್ರಿಕೆಗಳಲ್ಲಿಯ ಸ್ಥಳಾಭಾವದ ಮೂಲಕ ವಿಸ್ತಾರವಾಗಿ ಬರೆಯಲಾರರು. ಇದಲ್ಲದೇ ಅವರವರ ಅನುಭವಗಳಂತೆ ಆಯಾ ವರ್ಗದವರಿಗೆ ಮಾತ್ರ ಅನ್ವಯಿಸುವಂತೆ ಫಲ ಹೇಳುವದರಲ್ಲಿಯೂ ಔಚಿತ್ಯವಿದೆ ಎನ್ನಬಹುದು.

ಕೊನೆಯದಾಗಿ ನಿಯತಕಾಲಿಕ ಭವಿಷ್ಯ ಬರೆಯುವದರಲ್ಲಿಯೂ ಅನೇಕ ಪದ್ಧತಿಗಳೂ ವಿವಿಧ ರೀತಿಗಳೂ ಇರುವದರಿಂದಲೂ ವಿಭಿನ್ನತೆಗೆ ಕಾರಣವಾಗುತ್ತದೆ.

### ಪತ್ರಿಕೋದ್ಯೋಗಿಗಳ ಹೊಣೆಗಾರಿಕೆ

ಪತ್ರಿಕೆಗಳ ಭವಿಷ್ಯ ಸೂಚನೆಗಳಲ್ಲಿ ಕಂಡು ಬರುವ ಭೇದಕ್ಕೆ ಪತ್ರಿಕೋದ್ಯಮಿಗಳೂ ತಕ್ಕ ಮಟ್ಟಿಗೆ ಕಾರಣರೆಂದರೆ ತಪ್ಪಾಗಲಾರದು. ಈ ಸಂದರ್ಭದಲ್ಲಿ ಕರ್ನಾಟಕದ ಖ್ಯಾತ ಪತ್ರಿಕೋದ್ಯಮಿಗಳೊಬ್ಬರು ಸಮಾರಂಭವೊಂದರಲ್ಲಿ ಹೇಳಿದುದನ್ನು ನೆನಪಿಗೆ ತರುತ್ತೇನೆ.

" ಜ್ಯೋತಿಷಿಗಳು ನಮಗೆ ಒಂದು ವಾರದ ಭವಿಷ್ಯವನ್ನು ಬರೆದು ಕೊಟ್ಟರೆ, ಅದನ್ನು ತಿರುವು ಮುರುವು ಮಾಡಿ ಮೂರು ತಿಂಗಳುಗಳ ಕಾಲ ಪ್ರಕಟಿಸುತ್ತೇವೆ. " ಅದಕ್ಕೆ ನಾನು ಅವರನ್ನು ಭೆಟ್ಟಿಯಾದಾಗ ಮೂರು ತಿಂಗಳೇಕೆ ೧೨ ರಾಶಿಗಳ ಭವಿಷ್ಯವನ್ನೂ ೧೪೪ ವಾರಗಳ ಕಾಲ ತಿರುವು ಮುರುವು ಮಾಡಬಹುದೆಂದು ಹಾಸ್ಯಪೂರಕವಾಗಿ ಸೂಚಿಸಿದರೂ, ಈ ರೀತಿ ಮಾಡುವ ಬದಲು ಈ ಭವಿಷ್ಯದ ಕಾಲಂ ಅನ್ನೇ (column) ಬಿಟ್ಟು ಬಿಡಬಹುದೆಂದು ಅಭಿಪ್ರಾಯಪಟ್ಟೆನು. ಅದಕ್ಕೆ ಅವರು ಉತ್ತರ

ಮೀಯುತ್ತ ಆ ರೀತಿ ಮಾಡಲಾಗದೆಂದೂ, ಓದುಗರು ಭವಿಷ್ಯದ ಕಾಲಂ ಬಗ್ಗೆ ಅತ್ಯಂತ ಆಸಕ್ತಿ ವಹಿಸುವದರಿಂದ ಅದನ್ನು ಅವರಿಗೆ ಕೊಡಲೇ ಬೇಕಾಗುತ್ತದೆಂದೂ ಅವರು ನನಗೆ ತಿಳಿಸಿದರು.

ಮತ್ತೊಬ್ಬ ಪತ್ರಿಕೋದ್ಯಮಿಯು ಈ ಬಗ್ಗೆ ನನ್ನೊಡನೆ ಮಾತನಾಡುತ್ತ, ಅನೇಕ ಜ್ಯೋತಿಷಿಗಳು ತಮ್ಮ ಆಲಸ್ಯದ ಮೂಲಕ ನಿಯಮಿತ ಕಾಲಕ್ಕೆ ಸರಿಯಾಗಿ ಪತ್ರಿಕೆಗಳಿಗೆ ಭವಿಷ್ಯದ ಸೂಚನೆಗಳನ್ನು ಬರೆದು ಕಳಿಸುವದಿಲ್ಲವೆಂದೂ, ಇದರಿಂದ ಹಿಂದಿನ ಸಂಚಿಕೆಗಳಿಂದಲೇ ಅವುಗಳನ್ನು ಆಯ್ದು, ತಮ್ಮ ಮನಸ್ಸಿಗೆ ಕಂಡುಬಂದಂತೆ ಪ್ರಕಟಿಸುವದು ಅನಿವಾರ್ಯವಾಗುವದೆಂದೂ ತಿಳಿಸಿದರು. ಆದರೆ ಇದರಲ್ಲಿ ಒಂದು ವಿಚಿತ್ರದ ಸಂಗತಿಯೆಂದರೆ, ಇವೆಲ್ಲವೂ ಅದೇ ಜ್ಯೋತಿಷಿಗಳ ಹೆಸರಿನಲ್ಲಿಯೇ ನಡೆಯುವದು.

ಇನ್ನು ಕೆಲ ಪತ್ರಿಕೆಗಳು ಇಂತಹ ಸಂದರ್ಭಗಳಲ್ಲಿ ಜ್ಯೋತಿಷ್ಯಕ್ಕೆ ಮೀಸಲಾಗಿರುವ **Astrological Magazine** ಹಾಗೂ ಜ್ಯೋತಿರ್ವಾಣಿ ಮೊದಲಾದ ಪತ್ರಿಕೆಗಳಲ್ಲಿ ಪ್ರಕಟವಾದ ಭವಿಷ್ಯ ಸೂಚನೆಗಳನ್ನು ನೋಡಿಕೊಂಡು, ಅದರ ಸಾರ ಅಥವಾ ಅದನ್ನೇ ಸಂಕ್ಷಿಪ್ತ ಮಾಡಿ ತಮ್ಮ ನಿಯತಕಾಲಿಕ ಪತ್ರಿಕೆಗಳಲ್ಲಿ ಪ್ರಕಟಿಸುವರು. ಇಷ್ಟೇ ಅಲ್ಲದೆ, ದೀಪಾವಳಿ ಭಿನ್ನ ಭಿನ್ನ ವಾರ್ಷಿಕ ಸಂಚಿಕೆಗಳನ್ನು ತರಿಸಿ, ಆ ಪತ್ರಿಕೆಯಲ್ಲಿಷ್ಟು, ಈ ಪತ್ರಿಕೆಯಲ್ಲಿಷ್ಟು ಕೂಡಿಸಿ ತಮ್ಮ ಪತ್ರಿಕೆಯಲ್ಲಿ ಪ್ರಕಟಿಸುವರು. ಇದಲ್ಲದೇ ಇನ್ನು ಕೆಲವರು ಪಂಚಾಂಗ ಮೊದಲಾದ ಜ್ಯೋತಿಷ್ಯ ಸಾಹಿತ್ಯದಿಂದ ತಮಗೆ ತಿಳಿದು ಬರುವಂತೆ ಪ್ರಕಟಿಸುವರು.

ಇಂತಹ ಕೃತಿಗಳಿಂದ ವಾಚಕರಿಗೆ ಮೋಸವೂ, ಶಾಸ್ತ್ರಕ್ಕೆ ದ್ರೋಹವೂ, ಶಾಸ್ತ್ರಜ್ಞರಿಗೆ ಅಪಮಾನವೂ, ಅಪಂತಾಗುವದು. ಈ ಎಲ್ಲ ಸಂಗತಿಗಳಿಂದ ಪತ್ರಿಕೆಗಳಲ್ಲಿ ಭಿನ್ನತೆ ಕಂಡುಬರುವದಕ್ಕೆ ಪತ್ರಿಕೋದ್ಯಮಿಗಳೂ ಭಾಗಶಃ ಹೊಣೆಗಾರರೆಂಬುದು ಸ್ಪಷ್ಟವಾಗುದು.



# ಗ್ರಹಗತಿಯ ಬಗೆಗೆ ಕೆಲವು ಅನುಭವಿಕ ನಿಯಮಗಳು

ಆಯಾ ರಾಶಿಯವರಿಗೆ ಶುಭಾಶುಭ ಅವಧಿಗಳು ಪ್ರತಿವರ್ಷ ಯಾವವು? ಗೋಚರ ಗ್ರಹಗಳ ಶುಭಾಶುಭ ಪರಿಣಾಮದ ಫಲಗಳಾವವು? ಈ ಪ್ರಶ್ನೆಗಳನ್ನು ವಿವೇಚಿಸುವುದಲ್ಲದೆ, ಅಭ್ಯಾಸಕ್ಕೆ ಉಪಯುಕ್ತವಾಗುವಂತೆ ಕೆಲವು ಮಾದರಿ ಕುಂಡಲಿಗಳನ್ನು ಕೊಟ್ಟು ಈ ಪ್ರಕರಣದಲ್ಲಿ ವಿವೇಚಿಸಲಾಗಿದೆ.

ಮೇಷಾದಿ ದ್ವಾದಶ ರಾಶಿಯವರಿಗೆ ಪ್ರತಿ ವರ್ಷ. ಈ ಕೆಳಗೆ ಬರೆದ ಅವಧಿಗಳು ಶುಭಾಶುಭ ಫಲದಾಯಕವಿರುತ್ತವೆ—

**ಮೇಷ:—** ಈ ರಾಶಿಯವರಿಗೆ ಪ್ರತಿ ವರ್ಷ ಕೆಳಗೆ ಕಾಣಿಸಿದ ತಿಂಗಳುಗಳು ಶುಭದಾಯಕವಿರುತ್ತವೆ.

> ಡಿಶಂಬರ ೧೫ ರಿಂದ ಮಾರ್ಚ ೧೫ ರ ವರೆಗೆ ಹಾಗೂ ಜೂನ ೧೫ ರಿಂದ ಜುಲೈ ೧೫ ರ ವರೆಗೆ ವರೆಗೆ ಮತ್ತು ಸಪ್ಟಂಬರ ೧೫ ರಿಂದ ಅಕ್ಟೋಬರ ೧೬ ರ ವರೆಗೆ.

ಈ ಕೆಳಗೆ ಬರೆದ ತಿಂಗಳಲ್ಲಿಯ ಅವಧಿಯು ಅಶುಭ ( ಪ್ರತಿಕೂಲ ) ವಿರುತ್ತವೆ—

> ಮಾರ್ಚ ೧೫ ರಿಂದ ಎಪ್ರೀಲ ೧೪ ರ ವರೆಗೆ ಹಾಗೂ ಜುಲೈ ೧೫ ರಿಂದ ಅಗಸ್ಟ ೧೫ ಮತ್ತು ನವ್ಹಂಬರ ೧೫ ರಿಂದ ಡಿಶಂಬರ ೧೬ ರ ವರೆಗೆ

ಉಳಿದ ಅವಧಿಯಲ್ಲಿ ಶುಭಾಶುಭ ಮಿಶ್ರಿತ ಫಲವಿರುತ್ತದೆ.

**ವೃಷಭ:—** ಈ ರಾಶಿಯುವರಿಗೆ ಕೆಳಗೆ ಕಾಣಿಸಿದ ಅವಧಿಯು ಪ್ರತಿ ವರ್ಷ ಶುಭದಾಯಕವಿರುತ್ತದೆ.

ಜನೆವರಿ ೧೪ ರಿಂದ ಎಪ್ರಿಲ್ ೧೩ ರ ವರೆಗೆ ಹಾಗೂ ಜುಲೈ ೧೫ ರಿಂದ ಆಗಸ್ಟ ೧೫ ರ ವರೆಗೆ ಮತ್ತು ಆಕ್ಟೋಬರ ೧೭ ರಿಂದ ನವ್ಹಂಬರ ೧೫ ರ ವರೆಗೆ.

ಈ ಕೆಳಗಿನ ಅವಧಿಗಳು ಪ್ರತಿವರ್ಷ ಪ್ರತಿಕೂಲವಿರುತ್ತವೆ.

ಎಪ್ರಿಲ್ ೧೩ ರಿಂದ ಮೇ ೧೫ ರ ವರೆಗೆ, ಆಗಷ್ಟ ೧೫ ರಿಂದ ಸಪ್ಟಂಬರ ೧೬ ರ ವರೆಗೆ, ಮತ್ತು ಡಿಶಂಬರ ೧೫ ರಿಂದ ಜನವರಿ ೧೪ ರ ವರೆಗೆ.

ಉಳಿದ ಅವಧಿಯಾಯಲ್ಲಿ ಶುಭಾಶುಭ ಮಿಶಿತ ಫಲ.

**ಮಿಥುನ :—** ಈ ರಾಶಿಯುವರಿಗೆ ಕೆಳಗೆ ಕಾಣಿಸಿದ ಅವಧಿಗಳು ಪ್ರತಿ ವರ್ಷ ಅನುಕೂಲ ಇರುತ್ತವೆ.

ಫೆಬ್ರುವರಿ ೧೩ ರಿಂದ ಮೇ ೧೫ ರ ವರೆಗೆ, ಅಗಷ್ಟ ೧೬ ರಿಂದ ಸಪ್ಟಂಬರ ೧೬ ವರೆಗೆ ಮತ್ತು ನವ್ಹಂಬರ ೧೬ ರಿಂದ ಡಿಶಂಬರ ೧೬ ರ ವರೆಗೆ.

ಈ ಕೆಳಗಿನ ಅವಧಿಗಳು ಪ್ರತಿವರ್ಷ ಪ್ರತಿಕೂಲ ಇರುತ್ತವೆ.

ಮೇ ೧೫ ರಿಂದ ಜೂನ ೧೬ ರ ವರೆಗೆ, ಸಪ್ಟಂಬರ ೧೬ ರಿಂದ ಅಕ್ಟೋಬರ ೧೮ ರ ವರೆಗೆ ಮತ್ತು ಜನೇವರಿ ೧೪ ರಿಂದ ಫೆಬ್ರುವರಿ ೧೩ ರ ವರೆಗೆ. ಉಳಿದ ಅವಧಿಯಲ್ಲಿ ಶುಭಾಶುಭ ಮಿಶ್ರಿತ ಫಲವಿರುತ್ತದೆ.

**ಕರ್ಕ:—** ಈ ರಾಶಿಯುವರಿಗೆ ಕೆಳಗೆ ಕಾಣಿಸಿದ ಅವಧಿಗಳು ಪ್ರತಿ ವರ್ಷ ಅನುಕೂಲವಿರುತ್ತವೆ

ಮಾರ್ಚ ೧೫ ರಿಂದ ಜೂನ ೧೫ ರ ವರೆಗೆ, ಸಪ್ಟಂಬರ ೧೬ ರಿಂದ ಅಕ್ಟೋಬರ ೧೮ ರ ವರೆಗೆ ಹಾಗೂ ಡಿಶಂಬರ ೧೫ ರಿಂದ ಜನೇವರಿ ೧೪ ರ ವರೆಗೆ.

ಈ ಕೆಳಗೆ ಕಾಣಿಸಿದ ಅವಧಿಗಳು ಈ ರಾಶಿಯುವರಿಗೆ ಪ್ರತಿ ವರ್ಷ ಪ್ರತಿಕೂಲವಿರುತ್ತವೆ—

ಫೆಬ್ರುವರಿ ೧೨ ರಿಂದ ಮಾರ್ಚ ೧೫ ರ ವರೆಗೆ, ಜೂನ ೧೫ ರಿಂದ ಜುಲೈ ೧೫ ರ ವರೆಗೆ ಹಾಗು ಅಕ್ಟೋಬರ ೧೭ ರಿಂದ ನವ್ಹಂಬರ ೧೫ ರ ವರೆಗೆ.

ಇನ್ನುಳಿದ ಅವಧಿಗಳಲ್ಲಿ ಶುಭಾಶುಭ ಮಿಶ್ರಿತ ಫಲವಿರುತ್ತದೆ.

ಸಿಂಹ:— ಈ ರಾಶಿಯವರಿಗೆ ಈ ಕೆಳಗೆ ಕಾಣಿಸಿದ ಅವಧಿಗಳು ಪ್ರತಿವರ್ಷ ಅನುಕೂಲವಿರುತ್ತವೆ.

ಎಪ್ರಿಲ್ ೧೨ ರಿಂದ ಜುಲೈ ೧೫ ರ ವರೆಗೆ, ಅಕ್ಟೋಬರ ೧೭ ರಿಂದ ನವ್ಹಂಬರ ೧೫ ರ ವರೆಗೆ ಮತ್ತು ಜನೆವರಿ ೧೪ ರಿಂದ ಫೆಬ್ರುವರಿ ೧೨ ರ ವರೆಗೆ.

ಈ ಕೆಳಗಿನ ಅವಧಿಗಳು ಪ್ರತಿ ವರ್ಷ ಪ್ರತಿಕೂಲ ವಿರುತ್ತವೆ.

ಜುಲೈ ೧೫ ರಿಂದ ಅಗಷ್ಟ ೧೬ ರ ವರೆಗೆ, ನವ್ಹಂಬರ ೧೫ ರಿಂದ ಡಿಶಂಬರ ೧೬ ರ ವರೆಗೆ ಮತ್ತು ಮಾರ್ಚ ೧೬ ರಿಂದ ಎಪ್ರಿಲ್ ೧೪ ರ ವರೆಗೆ.

ಇನ್ನುಳಿದ ಅವಧಿಗಳಲ್ಲಿ ಶುಭಾಶುಭ ಮಿಶ್ರಿತ ಫಲ ಕೊಡುತ್ತವೆ.

ಕನ್ಯಾ:— ಈ ರಾಶಿಯವರಿಗೆ ಕೆಳಗೆ ಕಾಣಿಸಿದ ಅವಧಿಗಳು ಪ್ರತಿ ವರ್ಷ ಅನುಕೂಲವಿರುತ್ತವೆ—

ಮೇ ೧೫ ರಿಂದ ಅಗಷ್ಟ ೧೫ ರ ವರೆಗೆ, ನವ್ಹಂಬರ ೧೬ ರಿಂದ ಡಿಶಂಬರ ೧೬ ರ ವರೆಗೆ ಹಾಗೂ ಫೆಬ್ರುವರಿ ೧೩ ರಿಂದ ಮಾರ್ಚ ೧೫ ರ ವರೆಗೆ.

ಈ ಕೆಳಗೆ ಕಾಣಿಸಿದ ಅವಧಿಗಳಲ್ಲಿ ಪ್ರತಿ ವರ್ಷ ಪ್ರತಿಕೂಲ ಫಲ ವಿರುತ್ತವೆ—

ಅಗಷ್ಟ ೧೫ ರಿಂದ ಸಪ್ಟಂಬರ ೧೬ ರ ವರೆಗೆ, ಡಿಶಂಬರ ೧೫ ರಿಂದ ಜನೆವರಿ ೧೪ ರ ವರೆಗೆ ಹಾಗೂ ಎಪ್ರಿಲ್ ೧೨ ರಿಂದ ಮೇ ೧೫ ರ ವರೆಗೆ.

ಇನ್ನುಳಿದ ಅವಧಿಗಳು ಶುಭಾಶುಭ ಮಿಶ್ರವಿರುತ್ತವೆ.

**ತುಲಾ:**— ಈ ರಾಶಿಯವರಿಗೆ ಈ ಕೆಳಗೆ ಕಾಣಿಸಿದ ಅವಧಿಗಳು ಪ್ರತಿವರ್ಷ ಅನುಕೂಲವಿರುತ್ತವೆ—

ಜೂನ ೧೫ ರಿಂದ ಸಪ್ಟಂಬರ ೧೬ ರ ವರೆಗೆ, ಡಿಸಂಬರ ೧೫ ರಿಂದ ಜನೆವರಿ ೧೪ ರ ವರೆಗೆ ಹಾಗೂ ಮಾರ್ಚ ೧೬ ರಿಂದ ಎಪ್ರಿಲ್ ೧೪ ರ ವರೆಗೆ.

ಈ ಕೆಳಗಿನ ಅವಧಿಗಳು ಪ್ರತಿಕೂಲವಿರುತ್ತವೆ.

ಸಪ್ಟಂಬರ ೧೬ ರಿಂದ ಅಕ್ಟೋಬರ ೧೮ ರ ವರೆಗೆ, ಜನೇವರಿ ೧೪ ರಿಂದ ಫೆಬ್ರುವರಿ ೧೩ ರ ವರೆಗೆ ಮತ್ತು ಮೇ ೧೫ ರಿಂದ ಜೂನ ೧೬ ರ ವರೆಗೆ.

ಇನ್ನುಳಿದ ಅವಧಿಗಳು ಶುಭಾಶುಭ ಮಿಶ್ರಿತವಿರುತ್ತವೆ.

**ವೃಶ್ಚಿಕ** :— ಈ ರಾಶಿಯವರಿಗೆ ಈ ಕೆಳಗಿನ ಅವಧಿಗಳು ಪ್ರತಿವರ್ಷ ಅನುಕೂಲವಿರುತ್ತವೆ—

ಜುಲೈ ೧೫ ರಿಂದ ಅಕ್ಟೋಬರ ೧೮ ರ ವರೆಗೆ, ಜನೆವರಿ ೧೪ ರಿಂದ ಫೆಬ್ರುವರಿ ೧೩ ರ ವರೆಗೆ—ಮತ್ತು ಎಪ್ರೀಲ ೧೩ ರಿಂದ ಮೇ ೧೫ ರ ವರೆಗೆ.

ಈ ರಾಶಿಯವರಿಗೆ ಕೆಳಗಿನ ಅವಧಿಗಳು ಪ್ರತಿಕೂಲವಿರುತ್ತವೆ. ಅಕ್ಟೋಬರ ೧೮ ರಿಂದ ನವ್ಹಂಬರ ೧೫ ರ ವರೆಗೆ. ಫೆಬ್ರುವರಿ ೧೩ ರಿಂದ ಮಾರ್ಚ ೧೪ ರ ವರೆಗೆ ಹಾಗೂ ಜೂನ ೧೫ ರಿಂದ ಜುಲೈ ೧೬ ರ ವರೆಗೆ—

ಇನ್ನುಳಿದ ಅವಧಿಗಳು ಶುಭಾಶುಭ ಮಿಶ್ರಿತವಿರುತ್ತವೆ.

**ಧನು:** – ಈ ರಾಶಿಯವರಿಗೆ ಈ ಕೆಳಗೆ ಕಾಣಿಸಿದ ಅವಧಿಗಳು ಪ್ರತಿವರ್ಷ ಅನುಕೂಲವಿರುತ್ತವೆ—

ಅಗಷ್ಟ ೧೫ ರಿಂದ ನವ್ಹಂಬರ ೧೫ ರ ವರೆಗೆ, ಫೆಬ್ರುವರಿ ೧೩ ರಿಂದ ಮಾರ್ಚ ೧೫ ರ ವರೆಗೆ ಮತ್ತು ಮೇ ೧೫ ರಿಂದ ಜೂನ ೧೫ ರ ವರೆಗೆ—

ಈ ರಾಶಿಯವರಿಗೆ ಪ್ರತಿವರ್ಷ ಕೆಳಗಿನ ಅವಧಿಗಳು ಪ್ರತಿಕೂಲವಿರುತ್ತವೆ.

ನವ್ಹಂಬರ ೧೫ ರಿಂದ ಡಿಶಂಬರ ೧೬ ರ ವರೆಗೆ, ಮಾರ್ಚ ೧೫ ರಿಂದ ಎಪ್ರಿಲ್ ೧೫ ರ ವರೆಗೆ ಮತ್ತು ಜುಲೈ ೧೫ ರಿಂದ ಅಗಸ್ಟ ೧೫ ರ ವರೆಗೆ.

ಇನ್ನುಳಿದ ಅವಧಿಗಳು ಶುಭಾಶುಭ ಮಿಶ್ರಿತವಿರುತ್ತವೆ.

ಮಕರ:— ಈ ರಾಶಿಯವರಿಗೆ ಪ್ರತಿವರ್ಷ ಈ ಕೆಳಗಿನ ಅವಧಿಗಳು ಅನುಕೂಲವಿರುತ್ತವೆ.

ಸಪ್ಟಂಬರ ೧೬ ರಿಂದ ಡಿಶಂಬರ ೧೬ ರ ವರೆಗೆ, ಮಾರ್ಚ ೧೫ ರಿಂದ ಎಪ್ರಿಲ್ ೧೪ ರ ವರೆಗೆ ಮತ್ತು ಜೂನ ೧೫ ರಿಂದ ಜುಲೈ ೧೫ ರ ವರೆಗೆ—

ಈ ಕೆಳಗೆ ಕಾಣಿಸಿದ ಅವಧಿಗಳು ಈ ರಾಶಿಯವರಿಗೆ ಪ್ರತಿವರ್ಷ ಪ್ರತಿಕೂಲವಿರುತ್ತವೆ—

ಡಿಶಂಬರ ೧೬ ರಿಂದ ಜನವರಿ ೧೪ ರ ವರೆಗೆ, ಎಪ್ರಿಲ್ ೧೩ ರಿಂದ ಮೇ ೧೫ ರ ವರೆಗೆ ಮತ್ತು ಅಗಸ್ಟ ೧೫ ರಿಂದ ಸಪ್ಟಂಬರ ೧೬ ರ ವರೆಗೆ.

ಇನ್ನುಳಿದ ಅವಧಿಗಳು ಶುಭಾಶುಭ ಮಿಶ್ರಿತವಿರುತ್ತವೆ.

ಕುಂಭ: — ಈ ರಾಶಿಯವರಿಗೆ ಈ ಕೆಳಗಿನ ಅವಧಿಗಳು ಪ್ರತಿವರ್ಷ ಅನುಕೂಲವಿರುತ್ತವೆ—

ಅಕ್ಟೋಬರ ೧೭ ರಿಂದ ಜನೆವರಿ ೧೪ ರ ವರೆಗೆ, ಎಪ್ರಿಲ್ ೧೩ ರಿಂದ ಮೇ ೧೪ ರ ವರೆಗೆ ಹಾಗೂ ಜುಲೈ ೧೫ ರಿಂದ ಅಗಸ್ಟ ೧೫ ರ ವರೆಗೆ.

ಈ ಕೆಳಗೆ ಕಾಣಿಸಿದ ಅವಧಿಗಳು ಈ ರಾಶಿಯವರಿಗೆ ಪ್ರತಿವರ್ಷ ಪ್ರತಿಕೂಲವಿರುತ್ತವೆ—

ಜನವರಿ ೧೪ ರಿಂದ ಫೆಬ್ರುವರಿ ೧೩ ರ ವರೆಗೆ, ಮೇ ೧೫ ರಿಂದ ಜೂನ ೧೫ ರ ವರೆಗೆ ಮತ್ತು ಸಪ್ಟಂಬರ ೧೬ ರಿಂದ ಅಕ್ಟೋಬರ ೧೬ ರ ವರೆಗೆ.

ಇನ್ನುಳಿದ ಅವಧಿಗಳು ಶುಭಾಶುಭ ಮಿಶ್ರಿತ ವಿರುತ್ತವೆ.

೬

| ಚಂ | | | |
|---|---|---|---|
| | | | |
| | | | ಗು |
| ಲಗ್ನ | | | |

ಧನುಲಗ್ನದ ಮೀನರಾಶಿಯ ಚಂದ್ರನಿರುವ ಭಾಗ್ಯದಲ್ಲಿ ಸಿಂಹರಾಶಿಯ ಗುರುವಿರುವ ೬ನೆಯ ನಂಬರಿನ ಜಾತಕ ನೋಡಿರಿ. ಇಲ್ಲಿ ಗೋಚರಿಯಿಂದ ಗುರುವು ಕರ್ಕರಾಶಿಯಲ್ಲಿ ಪ್ರವೇಶಿಸಿದಾಗ್ಗೆ ಮೀನರಾಶಿಯಪರಿಗೆ ೫ ನೆಯ ಗುರುವು ಆದಾಗ್ಯೂ ಅಶುಭ ಫಲವನ್ನು ಕೊಡುವನು. ಕಾರಣವಿಷ್ಟೆ-ಲಗ್ನೇಶ-ಚತುರ್ಥೇಶನ ಪರಿಭ್ರಮಣ ಅಷ್ಟಮದಲ್ಲಿ ಆಗುವದರಿಂದ, ಆದರೆ ಉಚ್ಚರಾಶಿಯಲ್ಲಿ ಪರಿಭ್ರಮಣವೂ ೫ನೆಯ ಗುರುವೂ ಇರುವ ಕಾರಣ ಹೆಚು ಹಾನಿಯಾಗಲಾರದು. ಆದರೆ ಅದೇ ಲಗ್ನದ ಭಾಗ್ಯಸ್ಥಾನದ ಮೇಲಿಂದ್ದ ಗುರುವಿನ ಪರಿಭ್ರಮಣವು ಹೆಚ್ಚು ಶುಭಫಲದಾಯಕವಾಗುತ್ತದೆ. ಕಾರಣ ಭಾಗ್ಯಸ್ಥಾನದ ಮೇಲಿಂದಲೂ, ಮೂಲ ಗುರುವಿನ ಮೇಲಿಂದಲೂ ಪರಿಭ್ರಮಣ ಶುಭ ಫಲದಾಯಕವು.

ಗ್ರಹಗತಿಯ ಬಗ್ಗೆ ಕೆಲವು ಅನುಭವಿಕ ನಿಯಮಗಳು

೧) ಗುರುವು ಗೋಚರಿಯಿಂದ ಜನ್ಮಸ್ಥ, ಸಪ್ತಮ, ನವಮನಾಗಿ ಬಂದಾಗ ಪರದೇಶ ಗಮನವನ್ನೂ, ಸ್ಥಳಾಂತರವನ್ನೂ, ದೂರದ ಪ್ರವಾಸವನ್ನೂ ಕೊಡುತ್ತಾನೆ.

೨) ಗೋಚರೀ ಗುರುವಿನ ಪರಿಭ್ರಮಣವು ಮೂಲ ಜಾತಕದ ಲಗ್ನ, ತೃತೀಯ, ಸಪ್ತಮ, ನವಮ ಈ ಸ್ಥಾನಗಳ ಮೇಲಿಂದ ಆಗುವಾಗ ಸ್ಥಳಾಂತರ, ತೀರ್ಥಯಾತ್ರಾ ಸಂದರ್ಶನ, ದೂರದ ಪ್ರವಾಸ, ಪರದೇಶ ಗಮನದ ಯೋಗವಾಗುವದು.

(೨) ಗುರುವು ಗೋಚರಿಯಿಂದ ನವಮನಾಗಿ ಬಂದಾಗ ಭಾಗ್ಯೋದಯದ ಕಾಲ ಪ್ರಾರಂಭವಾಗುತ್ತದೆ.

(೪) ಗುರು–ಶನಿಯರು ಗೋಚರಿಯಿಂದ ಶುಭರಿದ್ದಾಗ ಸರಕಾರ ದಿಂದಲೂ, ಸಮಾಜದಿಂದಲೂ ಮಾನಸನ್ಮಾನ ಲಭಿಸುತ್ತದೆ.

(೫) ಗೋಚರಿಯಿಂದ ಗುರುವು ನವಮನಾಗಿಯೂ ಶನಿಯು ಏಕಾದಶ ನಾಗಿಯೂ ಬಂದರೆ, ಇಲ್ಲವೇ ಗುರು–ಶನಿಯರು ಗೋಚರಿಯಿಂದ ಶುಭರಿರುವ ಕಾಲವೆಂದರೆ ಸುವರ್ಣಕಾಲವಿದ್ದಂತೆ.

೬) ಗುರುವು ಜನ್ಮಸ್ಥನಾಗಿ ಬಂದಾಗ ಆರ್ಥಿಕ, ಔದ್ಯೋಗಿಕ, ಸಾಮಾಜಿಕ, ಕೌಟುಂಬಿಕ, ಇರುವ ಸ್ಥಳ ಮುಂತಾದ ಜೀವನದ ಎಲ್ಲ ರಂಗ ಗಳಲ್ಲಿಯೂ ಬದಲಾವಣೆಗಳನ್ನು ಕೊಡುತ್ತಾನೆ. (ಇಂಥ ಕಾಲವು ಪ್ರತಿ ಯೊಬ್ಬರಿಗೂ ೧೨ ವರ್ಷಗಳಿಗೊಮ್ಮೆ ಬರುತ್ತದೆ.)

೭) ಪ್ರತಿಯೊಬ್ಬರಿಗೂ ಪ್ರತಿಮಾಸದಲ್ಲಿಯೂ ೭ ದಿನಗಳು ಅಶುಭ ವಿರುತ್ತವೆ.

೮) ಗುರು–ಶುಕ್ರರು ಗೋಚರಿಯಿಂದ ಶುಭರಿದ್ದಾಗ ಕೌಟುಂಬಿಕ ಸೌಖ್ಯ ಸಿಗುತ್ತದೆ.

೯) ಚಂದ್ರನು ಗೋಚರಿಯಿಂದ ಜನ್ಮಸ್ಥ, ದ್ವಿತೀಯ, ತೃತೀಯನಾಗಿ ಬಂದಾಗ ಆಪ್ತೇಷ್ಟರ, ಬಂಧು–ಬಳಗದವರ ಭೆಟ್ಟಿ, ಪತ್ರಾಗಮನ, ಸುದ್ದಿ, ಸಮಾಚಾರ ತಿಳಿಯುವವು.

೧೦) ಗೋಚರಿಯಿಂದ ಶನಿ–ಮಂಗಳ ಇಲ್ಲವೇ ರವಿ–ಶನಿ ಇವರು ಅಶುಭರಿದ್ದು, ಇವರ ಯುತಿಯೋಗವಾಗಲೀ ಪ್ರತಿಯೋಗವಾಗಲೀ ಗಂಡಾಂತರ ವನ್ನು ತರುತ್ತದೆ. ಅಥವಾ ಅಗ್ನಿಭಯ, ಚೋರಭಯ, ಅಪಘಾತಾದಿ ಅಶುಭ ಫಲಗಳನ್ನು ಕೊಡುವರು.

೧೧) ನೌಕರದಾರರಿಗೆ ಗುರುವು ಗೋಚರಿಯಿಂದ ಜನ್ಮಸ್ಥನಾಗಿ ಬಂದಾಗ ವಿಭಾಗ, ಹುದ್ದೆ, ಖಾತೆಯಲ್ಲಿ ಬದಲಾವಣೆ (change in designation, section and department) ಕೊಡುತ್ತಾನೆ.

ಮಾದರಿ ೨

| | | | |
|---|---|---|---|
| | | | |
| | ಕರ್ಕಲಗ್ನ | | ಲಗ್ನ |
| | | | ಚಂದ್ರ |
| ಶನಿ | | | |

ಮಾದರಿ ೩

| | | | |
|---|---|---|---|
| | ಮಂಗಳ ಚಂದ್ರ | | |
| | ಕರ್ಕಲಗ್ನ | | ಲಗ್ನ |
| | | | |
| | | | |

ಮೇಲೆ ತೋರಿಸಿದ ಕರ್ಕಲಗ್ನದ ಸಿಂಹರಾಶಿಯ ಚಂದ್ರನಿರುವ ಷಷ್ಠದಲ್ಲಿ ಧನು ರಾಶಿಯ ಶನಿ ಇರುವ ಜಾತಕ ನೋಡಿರಿ. ಈ ಜಾತಕಕ್ಕೆ ಗೋಚರಿಯಿಂದ ಮಂಗಳನ ಪರಿಭ್ರಮಣವು ಮಿಥುನರಾಶಿಯಲ್ಲಿ ಆಗುವಾಗ ಸಾಮಾನ್ಯವಾಗಿ ಸಿಂಹರಾಶಿಯವರಿಗೆ ಗೋಚರಿಯಿಂದ ೧೧ ನೆಯವನೆಂದು ಶುಭನೆಂದು ನಿಯತ ಕಾಲಿಕ ಭವಿಷ್ಯಗಾರರು ಬರೆಯುತ್ತಾರೆ. ಆದರೆ ಮೇಲ್ಕಂಡ ಸಿಂಹ ರಾಶಿಯ ಈ ಜಾತಕಕ್ಕೆ ಮಂಗಳನು ಅಶುಭ ಫಲದಾಯಕನಾಗುವನು. ಕಾರಣವಿಷ್ಟೇ ; ಕರ್ಕಲಗ್ನಕ್ಕೆ ಯೋಗಕಾರಕ (ಪಂಚಮೇಶ–ದಶಮೇಶ) ಗ್ರಹವಾದ ಮಂಗಳನ ಪರಿಭ್ರಮಣವು ವ್ಯಯದಲ್ಲಿಯೂ, ಮೂಲ ಶನಿಯೊಂದಿಗೆ ಪ್ರತಿಯೋಗವು ಹಾನಿಯನ್ನುಂಟು ಮಾಡುತ್ತದೆ.

ಮೇಲೆ ತೋರಿಸಿದ ೩ ನೆಯ ನಂಬರಿನ ಜಾತಕ ನೋಡಿರಿ. ಇದು ಸಹ ಕರ್ಕ ಲಗ್ನದ್ದು ಇದ್ದು ದಶಮದಲ್ಲಿ ಮೇಷರಾಶಿಯಲ್ಲಿ ಚಂದ್ರ–ಮಂಗಳರು ವಿರಾಜಿಸಿದ್ದಾರೆ. ಇಲ್ಲಿ ಗೋಚರಿಯಿಂದ ಮಂಗಳನು ಮೇಷರಾಶಿಗೆ ಪ್ರವೇಶಿಸಿದಾಗ, ಸಾಮಾನ್ಯವಾಗಿ ಜನ್ಮಸ್ಥ ಮಂಗಳನು (ಮೇಷರಾಶಿಯವರಿಗೆ) ಅಶುಭ ಫಲದಾಯಕನೆಂದು ನಿಯತ ಕಾಲಿಕ ಭವಿಷ್ಯಗಾರರು ಹೇಳುವರು. ಆದರೆ ಈ ಜಾತಕಕ್ಕೆ ಜನ್ಮಸ್ಥ ಮಂಗಳನಿದ್ದರೂ ಕೂಡ ಅಶುಭ ಫಲದಾಯಕನಾಗದೆ ಶುಭ ಫಲದಾಯಕನಾಗುವನು. ಕಾರಣವಿಷ್ಟೆ – ದಶಮೇಶ ಪರಿ

ಭ್ರಮಣ ದಶಮಸ್ಥಾನದ ಮೇಲೆ ಹಾಗೂ ಮೂಲ ಮಂಗಳನ ಮೇಲೆ ಗೋಚರಿ ಮಂಗಳನ ಪರಿಭ್ರಮಣವು ಶುಭ ಫಲದಾಯಕವಿರುತ್ತದೆ.

೪

| | | | |
|---|---|---|---|
| | | | |
| | ಮಕರಲಗ್ನ ತುಲಾರಾಶಿ | | |
| ಲಗ್ನ | | | |
| | | ಚಂ. | |

೫

| | | | |
|---|---|---|---|
| | | ಲ ಚಂ | |
| | | | |
| | | | |
| | | | |

ಮೇಲೆ ತೋರಿಸಿದ ಮಕರ ಲಗ್ನದ ತುಲಾರಾಶಿಯ ಜಾತಕ ನೋಡಿರಿ. ಗೋಚರಿಯಿಂದ ಶುಕ್ರನ ಪರಿಭ್ರಮಣವು ಸಿಂಹ ರಾಶಿಯಲ್ಲಿ ಆಗುವಾಗ ತುಲಾರಾಶಿಯವರಿಗೆ ೧೧ನೆಯ ಶುಕ್ರನಾಗವದರಿಂದ ಶುಭ ಫಲದಾಯಕನೆಂದು ನಿಯತಕಾಲಿಕ ಭವಿಷ್ಯಗಾರರು ಬರೆಯುವರು. ಆದರೆ ಮೇಲೆ ತೋರಿಸಿದ ಜಾತಕಕ್ಕೆ ೧೧ನೆಯ ಶುಕ್ರನು ಅಶುಭದಾಯಕನಾಗುವನು. ಕಾರಣವಿಷ್ಟೆ ದಶಮೇಶ - ಪಂಚಮೇಶನಾದ ಶುಕ್ರನ ಪರಿಭ್ರಮಣವು ಅಷ್ಟಮಸ್ಥಾನದ ಮೇಲೆ ಆಗುತ್ತಿರುವದು ಗೋಚರಿಯಿಂದ ೧೧ನೆಯ ಶುಕ್ರನಾದರೂ ನಿಷ್ಪ್ರಯೋಜಕವಾಗುತ್ತದೆ.

ಹಿಂದೆ ತೋರಿಸಿದ ಮಿಥುನಲಗ್ನದ ಮಿಥುನರಾಶಿಯ ಜಾತಕ ನೋಡಿರಿ. ಇಲ್ಲಿ ಶುಕ್ರನು ಗೋಚರಿಯಿಂದ ವೃಷಭರಾಶಿಗೆ ಬಂದಾಗ ಈ ಮಿಥುನರಾಶಿಯವರಿಗೆ ೧೨ನೆಯ ಶುಕ್ರನೂ ದ್ವಾದಶ ಸ್ಥಾನದ ಮೇಲಿಂದ ಭ್ರಮಿಸುವ ಶುಕ್ರನಿದ್ದರೂ ಕೂಡ ಶುಭ ಫಲದಾಯಕನಾಗುವನು. ಕಾರಣವಿಷ್ಟೆ- ಮೊದಲನೆಯದಾಗಿ ಗೋಚರಿಯಿಂದ ೧೨ನೆಯ ಶುಕ್ರನು ಶುಭಫಲದಾಯಕನು. ಎರಡನೆಯದಾಗಿ ವಯಸ್ಥಾನದ ಮೇಲಿಂದ ಶುಕ್ರನ ಪರಿಭ್ರಮಣವು ಕೂಡ ಶುಭದಾಯಕವು; ಮೂರನೆಯದಾಗಿ ವೃಷಭ ರಾಶಿಯಲ್ಲಿ ಶುಕ್ರನ ಪರಿಭ್ರಮಣವು ಕೂಡ ಫಲದಾಯವಿರುತ್ತದೆ.

ಮೀನ:—ಈ ರಾಶಿಯವರಿಗೆ ಈ ಕೆಳಗೆ ಕಾಣಿಸಿದ ಅವಧಿಗಳು ಅನುಕೂಲವಿರುತ್ತವೆ—

ನವ್ಹಂಬರ ೧೫ ರಿಂದ ಫೆಬ್ರುವರಿ ೧೩ ರ ವರೆಗೆ. ಮೇ ೧೫ ರಿಂದ ಜೂನ ೧೬ ರ ವರೆಗೆ ಮತ್ತು ಅಗಷ್ಟ ೧೫ ರಿಂದ ಸಪ್ಟಂಬರ ೧೫ ರ ವರೆಗೆ.

ಈ ರಾಶಿಯವರಿಗೆ ಈ ಕೆಳಗಿನ ಅವಧಿಗಳು ಪ್ರತಿ ವರ್ಷ ಪ್ರತಿಕೂಲ ವಿರುತ್ತವೆ—

ಫೆಬ್ರುವರಿ ೧೨ ರಿಂದ ಮಾರ್ಚ ೧೫ ರ ವರೆಗೆ, ಜೂನ ೧೫ ರಿಂದ ಜುಲೈ ೧೫ ರ ವರೆಗೆ ಮತ್ತು ಅಕ್ಟೋಬರ ೧೬ ರಿಂದ ನವ್ಹಂಬರ ೧೫ ರ ವರೆಗೆ.

ಇನ್ನುಳಿದ ಅವಧಿಗಳು ಶುಭಾಶುಭ ಮಿಶ್ರಿತವಿರುತ್ತವೆ.

### ಅನುಕೂಲ ಪ್ರತಿಕೂಲಗಳ ಅರ್ಥವಿವರಣೆ

ಮೇಷಾದಿ ದ್ವಾದಶ ರಾಶಿಯವರಿಗೆ ಪ್ರತಿ ವರ್ಷ ಅನುಕೂಲ ಪ್ರತಿಕೂಲ ಅವಧಿಗಳಾವವು ಎಂಬುದನ್ನು ಈ ಹಿಂದೆ ಕೊಡಲಾಗಿದೆ. ಆದರೆ ಅನುಕೂಲ ಹಾಗೂ ಪ್ರತಿಕೂಲ ಈ ಶಬ್ದಗಳು ವ್ಯಾಪಕವಾದ ಅರ್ಥವುಳ್ಳವುಗಳಾಗಿವೆ.

ಅನುಕೂಲ ಅಂದರೆ ಉದ್ಯೋಗ, ನೌಕರಿ, ವ್ಯಾಪಾರ, ಆರ್ಥಿಕ ಮಾನಸಿಕ, ಕೌಟುಂಬಿಕ, ಶಾರೀರಿಕ, ಶೈಕ್ಷಣಿಕ, ಸಾಮಾಜಿಕ, ರಾಜಕೀಯ ಮೊದಲಾದ ಜೀವನದ ಎಲ್ಲ ವಿಷಯಗಳಲ್ಲಿಯೂ ಒಳ್ಳೆಯದು. ಏಕೆಂದರೆ ಅನುಕೂಲ ಇದರ ಅರ್ಥ. ಜಯ, ಯಶ, ಲಾಭ, ಶುಭ, ಪ್ರಗತಿ ಎಂದು ಅನೇಕ ಅರ್ಥಗಳನ್ನು ಮಾಡಬಹುದು.

ಇದರಂತೆಯೇ ಪ್ರತಿಕೂಲ ಎಂದರೆ-ಜೀವನದ ಎಲ್ಲ ರಂಗಗಳಲ್ಲಿಯೂ ಕೆಡಕು. ಪ್ರತಿಕೂಲ ಈ ಶಬ್ದಕ್ಕೆ ಕಲಹದಾಯಕ, ತಾಪದಾಯಕ, ತ್ರಾಸು, ಹಾನಿ, ಅಪಯಶ, ಅಶುಭ, ಅಸಮಾಧಾನ, ವಿಲಂಬಕಾರಕ, ಅನಿಷ್ಟ, ಅರಿಷ್ಟ ದಾಯಕ. ಅನಪೇಕ್ಷಿತ, ಅವ್ಯವಹಾರಿಕ, ಇಳಿತ ಈ ಮೊದಲಾದ ಅರ್ಥಗಳನ್ನೂ ಕೂಡ ಮಾಡಬಹುದು.

# ಮಾದರೀ ಕುಂಡಲಿಗಳು

## ಮಾದರಿ ೧

| | | | |
|---|---|---|---|
| | | ಕೆ | ಗು |
| ಚಂ. | | | |
| | | | ಲಗ್ನ<br>ಶನಿ |
| | ಮ<br>ರಾ | ರ | ಶು ಬು |

ಮೇಲಿನ ಜಾತಕವನ್ನು ನಿರೀಕ್ಷಿಸಿರಿ.

ಈ ಜಾತಕನಿಗೆ ಪ್ರತಿವರ್ಷ ಜನೆವರಿ ೧೪ ರಿಂದ ಎಪ್ರಿಲ್ ೧೨ ರವರೆಗಿನ ಕಾಲ ಅಂದರೆ ಗೋಚರಿಯಿಂದ ರವಿಯು ಮಕರರಾಶಿಯಲ್ಲಿ ಪ್ರವೇಶಿಸಿದಂದಿನಿಂದ ಮೇಷರಾಶಿಯಲ್ಲಿ ಪ್ರವೇಶಿಸುವ ಕಾಲ ಹಾಗೂ ಜುಲೈ ೧೫ ರಿಂದ ಅಕ್ಟೋಬರ ೧೫ರ ವರೆಗಿನ ಕಾಲ ಪ್ರತಿಕೂಲವಿರುತ್ತದೆ. ಹಾಗೂ ಜುಲೈ ೧೫ ರಿಂದ ಅಕ್ಟೋಬರ ೧೬ ರ ವರೆಗೆ ಪ್ರತಿವರ್ಷ ಪ್ರತಿಕೂಲವಿರುತ್ತವೆ.

ಕರ್ಕದಲ್ಲಿಯ ಗೋಚರೀ ರವಿಯ ಪರಿಭ್ರಮಣವು ಕುಂಭ ರಾಶಿಯ ವರೆಗೆ ಶುಭಫಲವನ್ನು ಕೊಡುವ, ಹಿಂದೆ ಹೇಳಿದ ಸಾಮಾನ್ಯ ನಿಯಮಗಳು ಈ ಜಾತಕಕ್ಕೆ ಅನ್ವಯಿಸದೆ, ಪ್ರತಿಕೂಲ ಫಲಗಳು ದೊರೆಯುತ್ತವೆ. ಕಾರಣವೇನೆಂದರೆ ಲಗ್ನೇಶನ ಪರಿಭ್ರಮಣವು ವ್ಯಯ ಸ್ಥಾನದಲ್ಲಿ ಆಗುತ್ತದೆ. ಮತ್ತು ಲಗ್ನದಲ್ಲಿ ಶನಿಯಿದ್ದ ಕಾರಣ ಪ್ರತಿವರುಷ ಸಿಂಹಸ್ಥ ರವಿ ಬಂದಾಗ ಪ್ರತಿಕೂಲ ಕಾಲವೂ, ಕನ್ಯಾದಲ್ಲಿ ರವಿ ಬಂದಾಗ ಗೋಚರಿಯಿಂದ ಅಷ್ಟಮ ರವಿಯೂ ಪ್ರತಿಕೂಲನು. ಆದುದರಿಂದ ಹಿಂದೆ ಹೇಳಿದ ಸಾಮಾನ್ಯ ನಿಯಮದ ಸಂಗಡ ಮೂಲಜಾತಕವನ್ನು ಅನ್ವಯಿಸಿ ಪರಿಶೀಲಿಸಬೇಕು.

೧೨) ಜನ್ಮರಾಶಿಯಿಂದ ಗುರುವು ಶುಭದಾಯಕನಿದ್ದು, ಅವನ ಪರಿಭ್ರಮಣವು ಜಾತಕದ ಲಗ್ನ, ತೃತೀಯ, ಪಂಚಮ, ಸಪ್ತಮ, ಭಾಗ್ಯ, ಏಕಾದಶ ಈ ಸ್ಥಾನಗಳ ಮೇಲಿಂದ ಆಗುವಾಗ ವಿವಾಹಯೋಗವನ್ನು ಕೊಡುತ್ತಾನೆ.

೧೩) ಗುರುವು ಗೋಚರಿಯಿಂದ ಜನ್ಮಸ್ಥ ಇಲ್ಲವೇ ನವಮನಾಗಿ ಬಂದಾಗ ಸ್ವತಂತ್ರ ಉದ್ಯೋಗಸ್ಥರಿಗೆ ನೌಕರಿಯನ್ನೂ ನೌಕರದಾರರಿಗೆ ಸ್ವತಂತ್ರ ಉದ್ಯೋಗವನ್ನೂ ಪ್ರಾರಂಭಿಸುವ ಕಾಲವಿರುತ್ತದೆ.

೧೪) ರವಿಯು ಗೋಚರಿಯಿಂದ ಅಶುಭನಿದ್ದಲ್ಲಿ ಆರೋಗ್ಯಕ್ಕೆ ಹಾನಿದಾಯಕವು.

೧೫) ಶುಕ್ರನು ಗೋಚರಿಯಿಂದ ಅಶುಭನಿದ್ದಲ್ಲಿ ಕೌಟುಂಬಿಕ ಅಶುಭವನ್ನೂ ಸ್ತ್ರೀಸೌಖ್ಯದ ಅಭಾವವನ್ನೂ ಕೊಡುತ್ತಾನೆ.

೧೬) ರವಿ, ಗುರು, ಮಂಗಳರು ಗೋಚರಿಯಿಂದ ಶುಭರಿದ್ದಾಗ ಕೋರ್ಟು, ಕಚೇರಿ ಕೆಲಸದಲ್ಲಿ ಯಶಸ್ಸು ಸಿಗುವದು.

೧೭) ಶನಿಯು ಗೋಚರಿಯಿಂದ ಶುಭನಿದ್ದಲ್ಲಿ ಆರ್ಥಿಕ ದೃಷ್ಟಿಯಿಂದ ಶುಭಕರವು.

೧೮) ವೃಷಭ ಇಲ್ಲವೇ ತುಲಾಲಗ್ನವಿದ್ದು ವೃಷಭ, ಸಿಂಹ, ಕನ್ಯಾ, ವೃಶ್ಚಿಕ, ಧನು, ಮೀನ, ಮೇಷ ಈ ರಾಶಿಯವರಿಗೆ ಗೋಚರೀ ಶನಿಯ ಪರಿಭ್ರಮಣವು ಮಕರ ಹಾಗೂ ಕುಂಭ ರಾಶಿಯಲ್ಲಿ ಆಗುತ್ತಿರುವದು ಶುಭದಾಯಕವು.

೧೯) ಭಿನ್ನ ಭಿನ್ನ ಲಗ್ನಗಳಿಗೆ ಯೋಗಾಕಾರಕ ಗ್ರಹಗಳು ಬೇರೆ ಬೇರೆ ಇದ್ದು ಆಯಾ ಲಗ್ನದ ಯೋಗಕಾರಕ ಗ್ರಹಗಳ ಕೇಂದ್ರ, ತ್ರಿಕೋಣಗಳ ಸಂಚಾರವು ಶುಭದಾಯಕ ವಿರುತ್ತದೆ.

೨೦) ಬುಧ, ಶುಕ್ರರು ಗೋಚರಿಯಿಂದ ಶುಭರಿದ್ದಾಗ ವ್ಯಾಪಾರ, ಉದ್ಯೋಗದಲ್ಲಿ ಲಾಭವನ್ನು ಕೊಡುತ್ತಾರೆ.

೨೧) ಬುಧ, ಗುರುಗಳು ಗೋಚರಿಯಿಂದ ಶುಭರಿದ್ದಾಗ ಲೇಖನೀ ವ್ಯವಸಾಯದಲ್ಲಿ ಜಯ, ಯಶಸ್ಸು ದೊರೆಯುವದು.